# ಮುನವಳ್ಳಿ : ಒಂದು ಸಾಂಸ್ಕೃತಿಕ ಅಧ್ಯಯನ

ಎಂ.ಫಿಲ್. ಪದವಿಗಾಗಿ ಹಂಪಿ ಕನ್ನಡ ವಿಶ್ವವಿದ್ಯಾಲಯಕ್ಕೆ
ಸಾದರಪಡಿಸಿದ ನಿಬಂಧ


ಸಂಶೋಧನ ವಿದ್ಯಾರ್ಥಿ
**ಕಡಕೋಳ ಯಲ್ಲಪ್ಪ ಬಸಪ್ಪ**

Reg. No. : BRDSHKS-00641

ಮಾರ್ಗದರ್ಶಕರು
**ಡಾ. ವ್ಹಿ. ಎಸ್. ಮಾಳಿ**
ನಿರ್ದೇಶಕರು
ಶ್ರೀ ಬಿ.ಆರ್.ದರೂರ ಸಂಶೋಧನ ಕೇಂದ್ರ
ಹಾರೂಗೇರಿ





**ಕನ್ನಡ ವಿಭಾಗ**
**ಕನ್ನಡ ವಿಶ್ವವಿದ್ಯಾಲಯ, ಹಂಪಿ**

ಜುಲೈ ೨೦೧೩

# ಮುನವಳ್ಳಿ : ಒಂದು ಸಾಂಸ್ಕೃತಿಕ ಅಧ್ಯಯನ

ಎಂ.ಫಿಲ್. ಪದವಿಗಾಗಿ ಹಂಪಿ ಕನ್ನಡ ವಿಶ್ವವಿದ್ಯಾಲಯಕ್ಕೆ
ಸಾದರಪಡಿಸಿದ ನಿಬಂಧ

ಸಂಶೋಧನ ವಿದ್ಯಾರ್ಥಿ
**ಕಡಕೋಳ ಯಲ್ಲಪ್ಪ ಬಸಪ್ಪ**

ಮಾರ್ಗದರ್ಶಕರು
**ಡಾ. ವ್ಹಿ. ಎಸ್. ಮಾಳಿ**
ನಿರ್ದೇಶಕರು
ಶ್ರೀ ಬಿ.ಆರ್.ದರೂರ ಸಂಶೋಧನ ಕೇಂದ್ರ
ಹಾರೂಗೇರಿ



**ಕನ್ನಡ ವಿಭಾಗ**
**ಕನ್ನಡ ವಿಶ್ವವಿದ್ಯಾಲಯ, ಹಂಪಿ**

ಜುಲೈ ೨೦೧೩

## ದೃಢೀಕರಣ ಪತ್ರ

**ಮುನವಳ್ಳಿ ಒಂದು ಸಾಂಸ್ಕೃತಿಕ ಅಧ್ಯಯನ** ಎಂಬ ಶೀರ್ಷಿಕೆಯ ಸಂಪ್ರಬಂಧವನ್ನು ಶ್ರೀ ಬಿ.ಆರ್.ದರೂರ ಸಂಶೋಧನೆ ಕೇಂದ್ರ ಹಾರೂಗೇರಿ ಮೂಲಕ ಹಂಪಿ ಕನ್ನಡ ವಿಶ್ವವಿದ್ಯಾಲಯಕ್ಕೆ ಕನ್ನಡ ವಿಷಯದಲ್ಲಿ ಎಂ.ಫಿಲ್. ಪದವಿಗಾಗಿ ಸಲ್ಲಿಸುತ್ತಿರುವ ಪ್ರಸ್ತುತ ಸಂಪ್ರಬಂಧವನ್ನು ಇವರು ಈ ಮೊದಲು ಇಡಿಯಾಗಿ ಇಲ್ಲವೇ ಬಿಡಿಯಾಗಿ ಎಲ್ಲಿಯೂ ಪ್ರಕಟಿಸಿಲ್ಲವೆಂದು ಹಾಗೂ ಯಾವುದೇ ಪದವಿಗಳಿಗಾಗಿ ಸಲ್ಲಿಸಿರುವುದಿಲ್ಲವೆಂದು ದೃಢೀಕರಿಸುತ್ತೇನೆ.

ಸ್ಥಳ: ಹಾರೂಗೇರಿ
ದಿನಾಂಕ; 29/7/2013

**ಡಾ. ವ್ಹಿ. ಎಸ್. ಮಾಳಿ**
ನಿರ್ದೇಶಕರು
ಶ್ರೀ ಬಿ.ಆರ್.ದರೂರ ಸಂಶೋಧನ ಕೇಂದ್ರ
ಹಾರೂಗೇರಿ

# ಪರಿವಿಡಿ


**ಅಧ್ಯಾಯ–ಒಂದು : ಅಧ್ಯಯನದ ಉದ್ದೇಶ,ವ್ಯಾಪ್ತಿ, ಸ್ವರೂಪ** **1–5**

1.1 ಅಧ್ಯಯನದ ಉದ್ದೇಶ
1.2. ಅಧ್ಯಯನದ ವ್ಯಾಪ್ತಿ
1.3 ಅಧ್ಯಯನದ ಸ್ವರೂಪ.

**ಅಧ್ಯಾಯ–ಎರಡು : ಮುನವಳ್ಳಿಯ ಚಾರಿತ್ರಿಕ ಅಧ್ಯಯನ** **6–22**

2.1 ಪಂಚಲಿಂಗೇಶ್ವರ ದೇವಾಲಯದಲ್ಲಿನ ಶಾಸನ
2.2 ಮುನವಳ್ಳಿ ಕೋಟೆ
2.3 ಚರಿತ್ರೆಯ ಪುಟಗಳಲ್ಲಿ ಮುನವಳ್ಳಿ
2.4 "ತೀರ್ಥ ಪ್ರಬಂಧಃ" ಕೃತಿಯಲ್ಲಿ ಮಲಪ್ರಭಾ ನದಿಯ ಕುರಿತ ವರ್ಣನೆ
2.5 ಶ್ರೀ ಮದ್ಭಗವದ್ಗೀತೆಯ ಹದಿಮೂರನೇ ಅಧ್ಯಾಯದ ಮಹಾತ್ಮೆಯಲ್ಲಿ ಮುನವಳ್ಳಿ
2.6 ಬ್ರಿಟಿಷ್ ಆಳ್ವಿಕೆಯ ಘಟನೆಗಳು
2.7 ಸ್ವಾತಂತ್ರ್ಯ ಹೋರಾಟದಲ್ಲಿ ಮುನವಳ್ಳಿ

**ಅಧ್ಯಾಯ–ಮೂರು : ಮುನವಳ್ಳಿಯ ಪ್ರಸಿದ್ಧ ದೇವಾಲಯಗಳು** **23–39**

3.1 ಶ್ರೀ ಪಂಚಲಿಂಗೇಶ್ವರ ದೇವಾಲಯ
3.2 ಕೈವಲ್ಯಾಶ್ರಮ ಸ್ವಾಮಿ ಮಠ
3.3 ವೀರಭದ್ರೇಶ್ವರ ದೇವಾಲಯ
3.4 ಕಾಳಿಕಾ ದೇವಾಲಯ
3.5 ಭೀಮಾಶಂಕರ ಶಿವಲಿಂಗ
3.6 ಶ್ರೀ ರುಕ್ಮಿಣಿ–ವಿಠ್ಠಲ ಮಂದಿರ
3.7 ಅಜ್ಜನಕಟ್ಟೆ(ಅಶ್ವತ್ಥ ಕಟ್ಟೆ)
3.8 ಸಾವಳಗಿ ಮಠ
3.9 ಕಂಬಿಮಠ
3.10 ಆಲೂರುಮಠ
3.11 ಸೋಮಶೇಖರ ಮಠ
3.12 ಶ್ರೀ ಶಿರಡಿ ಸಾಯಿಬಾಬಾ ಮಂದಿರ

**ಅಧ್ಯಾಯ ನಾಲ್ಕು : ಸಾಂಸ್ಕೃತಿಕ ಚಟುವಟಿಕೆಗಳು** **40–66**

4.1 ಶ್ರೀಗಳು–ಶಿವಾನುಭವ
4.2 ಮುನಿಪುರಾಧೀಶ ಮುರುಘೇಂದ್ರ ಮಹಾಸ್ವಾಮಿಗಳು
4.3 ಮರಿ ಕೋಗಿಲೆಗಳ ಸಂಗೀತ ಸಂಭ್ರಮ
4.4 ನಾಡಹಬ್ಬ
4.5 ಅಕ್ಕನ ಬಳಗ
4.6 ನೂತನ ವಿಜ್ಞಾನ ವೇದಿಕೆ(ರಿ)
4.7. ಅಂಬಾಭವಾನಿ ದೇವಾಲಯದ ನವರಾತ್ರಿ ಉತ್ಸವ
4.8 ಶಿಕ್ಷಣ ಪ್ರೇಮಿ ದಿ. ಜೇವೂರ ಗುರುಗಳು
4.9 ಪತ್ರಿಕಾರಂಗದ ಹಿರಿಯ ಚೇತನ ಮಲ್ಲೇಶಪ್ಪ ಪರಪ್ಪ ಬಡೆಮ್ಮಿ
4.10 ಗ್ರಾಮೀಣ ಛಾಯಾಗ್ರಹಣದಲ್ಲಿ ಬಸವರಾಜ ಪೋಟೋ ಸ್ಟುಡಿಯೋ
4.11 ರಂಗ ಪರಂಪರೆ, ಬಯಲಾಟಗಳು
4.12 ಚಲನಚಿತ್ರ ಮಂದಿರ

4.13 ಗರಡಿ ಮನೆಗಳು
4.14 ಶತಮಾನೋತ್ಸವದ ಸರಕಾರಿ ಶಾಲೆ
4.15 ಮುನವಳ್ಳಿ ಜೈಂಟ್ಸ್ ಗ್ರೂಪ್

**ಅಧ್ಯಾಯ ಐದು : ಸ್ಥಳೀಯ ಆಚರಣೆ–ನಂಬಿಕೆಗಳು ಜಾತ್ರೆಗಳು ಮತ್ತು ಹಬ್ಬಹರಿದಿನ, ಸಂಪ್ರದಾಯಗಳು** **67–79**

5.1 ಕಾಮದಹನ(ಹೋಳಿ ಹಬ್ಬ)
5.2 ಮೋಹರಂ
5.3 ಗಣೇಶ ಚತುರ್ಥಿ
5.4. ಪಂಚಲಿಂಗೇಶ್ವರ ದೇವಾಲಯದ ಆಚರಣೆಗಳು
5.5 ಸಾಯಿ ಮಂದಿರದ ಉತ್ಸವಗಳು
5.6 ದೇವರ ಮೂರ್ತಿಗೆ ಬುತ್ತಿ ಪೂಜೆಯ ಅಲಂಕಾರ
5.7 ಬುಡುಬುಡುಕೆಯವರು(ಸುಡುಗಾಡ ಸಿದ್ದರು)
5.8 ಮಹಾನವಮಿ
5.9 ಸಂಕ್ರಾಂತಿ ಹಬ್ಬ
5.10 ಜೋಕುಮಾರ
5.11 ಹರಿನಾಮ ಸಪ್ತಾಹ ಆಚರಣೆಗಳು

**ಅಧ್ಯಾಯ ಆರು : ಸಮಾರೋಪ** **80–83**

**ಅನುಬಂಧ** **84–100**

* ನಕ್ಷೆಗಳು
* ಛಾಯಾಚಿತ್ರಗಳು
* ಆಕರ ಗ್ರಂಥಗಳು



## ಅಧ್ಯಾಯ – ಒಂದು

# ಅಧ್ಯಯನದ ಉದ್ದೇಶ, ವ್ಯಾಪ್ತಿ, ಸ್ವರೂಪ ಮತ್ತು ನೈದಾನಿಕತೆ

ನಮ್ಮ ಭಾರತೀಯ ಸಂಸ್ಕೃತಿ ತನ್ನ ವೈವಿಧ್ಯತೆಯ ಕಾರಣಗಳಿಂದಾಗಿ ವಿಶ್ವಮಟ್ಟದಲ್ಲಿ ಹೆಸರು ಮಾಡಿದೆ. ನಮ್ಮ ಸಂಸ್ಕೃತಿಯ ಮೂಲ ಬೇರುಗಳನ್ನು ಕಾಣಬೇಕಾದರೆ ನಾವು ನಮ್ಮ ಗ್ರಾಮ ಸಮಾಜದೆಡೆಗೆ ನೋಡಬೇಕಾಗುತ್ತದೆ. ಈಗಿನ ಭಾರತೀಯ ಸಂಸ್ಕೃತಿಯೆಂಬುದು ಗ್ರಾಮೀಣ ಸಂಸ್ಕೃತಿಯ ಕೆನೆಪದರದ ಪ್ರತೀಕವೇ ಆಗಿದೆ. ಇದನ್ನು ಮನಗಂಡೇ ಮಹಾತ್ಮ ಗಾಂಧೀಜಿಯವರು ನಮ್ಮ ಸಂಸ್ಕೃತಿಯ ಮೂಲ ಬೇರುಗಳು ಗ್ರಾಮಗಳಲ್ಲಿವೆ ಎಂದು ಹೇಳಿದ್ದು. ಭಾರತದ ಯಾವುದೇ ಹಳ್ಳಿಗಳಿಗೆ ಭೇಟಿ ಕೊಟ್ಟರೂ ನಮ್ಮ ಸಂಸ್ಕೃತಿಯನ್ನೂ ಮತ್ತು ಪರಂಪರೆಯನ್ನೂ ಪ್ರತಿನಿಧಿಸುವ ಶಾಸನಗಳು, ದೇವಾಲಯಗಳೂ ಹಾಗೂ ಸ್ಮಾರಕಗಳೂ, ಆಚರಣೆಗಳೂ, ಒಂದಾದರೂ ಕಂಡು ಬರುತ್ತವೆ. ಕರ್ನಾಟಕವು ಈ ವಿಷಯಗಳಲ್ಲಿ ಅನ್ಯ ರಾಜ್ಯಗಳಿಗಿಂತ ಮುಂಚೂಣಿಯಲ್ಲಿದೆ.

### 1.1 ಅಧ್ಯಯನದ ಉದ್ದೇಶ

ಬೆಳಗಾವಿ ಜಿಲ್ಲೆಯ ಸವದತ್ತಿ ತಾಲೂಕಿನ ಮುನವಳ್ಳಿ ತಾಲೂಕಿನಲ್ಲಿಯೇ ತನ್ನದೇ ಆದ ಖ್ಯಾತಿಯನ್ನು ಹೊಂದಿದ ಮಲಪ್ರಭಾ ನದಿ ತಟದಲ್ಲಿರುವ ಶ್ರೀ ರೇಣುಕಾ ಸಕ್ಕರೆ ಕಾರ್ಖಾನೆ ಹಾಗೂ ಶ್ರೀ ಪಂಚಲಿಂಗೇಶ್ವರ ದೇವಾಲಯವನ್ನು ಹೊಂದಿದ ಸ್ಥಳ. ಐತಿಹಾಸಿಕವಾಗಿಯೂ, ಧಾರ್ಮಿಕವಾಗಿಯೂ ಚರಿತ್ರೆಯಲ್ಲಿ ತನ್ನದೇ ಆದ ನೆಲೆ ಹೊಂದಿದ್ದು, ದೇವಗಿರಿ ಯಾದವರ ಕಾಲದ ಶಾಸನ, ತೊರಗಲ್ ನಾಡಿನ ಆಡಳಿತ ಹೊಂದಿದೆ ಕೋಟೆ ಶಾಸನ ಮಾಸ್ತಿಕಲ್ಲುಗಳು ಪುರಾತನ ದೇಗುಲಗಳು ಇಲ್ಲಿನ ವಿಶೇಷತೆ. ಇಂದಿಗೂ ಇಲ್ಲಿ ಜರುಗುತ್ತಿರುವ ನಾಡಹಬ್ಬ, ವಿವಿಧ ಸಾಂಸ್ಕೃತಿಕ ಕಾರ್ಯಕ್ರಮಗಳು, ಶಿವಾನುಭವಗಳು, ಜಾತ್ರೆ ಉತ್ಸವಗಳು, ಮುನವಳ್ಳಿಯ ಸಾಂಸ್ಕೃತಿಕ ಪರಂಪರೆಯನ್ನು ಇಂದು ಪಸರಿಸುವುದರ ಜೊತೆಗೆ ವೈವಿಧ್ಯತೆಯ ದೃಷ್ಟಿಯಿಂದಲೂ ಇಲ್ಲಿನ ಶಾಸನಗಳು ಮತ್ತು ದೇವಾಲಯಗಳೂ ನಮ್ಮ ಗಮನ ಸೆಳೆಯುತ್ತವೆ.

ಪದವಿಯನ್ನು ಓದುವಾಗಲಿಂದಲೂ ನನಗೆ ಮುನವಳ್ಳಿ ಕುರಿತು ಲೇಖನಗಳನ್ನು ಇಲ್ಲಿನ ಸಾಂಸ್ಕೃತಿಕ ಚಟುವಟಿಕೆಗಳನ್ನು ನಾಡಿನ ಎಲ್ಲ ದಿನಪತ್ರಿಕೆಗಳಲ್ಲಿ ಬರೆಯುವ ಜೊತೆಗೆ ಅವುಗಳಲ್ಲಿ ಸಕ್ರಿಯವಾಗಿ ಪಾಲ್ಗೊಳ್ಳುವ ಮೂಲಕ ನನ್ನ ಶಿಕ್ಷಕ ವೃತ್ತಿ ಆರಂಭಿಸಿದ ನಂತರ ಕಳೆದ ಮೂವತ್ತು ವರ್ಷಗಳಿಂದಲೂ ಮುನವಳ್ಳಿಯಲ್ಲಿಯೇ ವಾಸ ಮಾಡುವ ಮೂಲಕ ಮೂಲತಃ ಸವದತ್ತಿಯವನಾದರೂ ನನ್ನ ಏಳನೆಯ ತರಗತಿಯಿಂದ ಶಿಕ್ಷಕರ ತರಬೇತಿಯವರೆಗಿನ ವ್ಯಾಸಾಂಗವನ್ನು ಮುನವಳ್ಳಿಯಲ್ಲಿಯೇ ಕಳೆದಿರುವ ನನಗೆ ಈ ಗ್ರಾಮದ ಬಗ್ಗೆ ಹೆಚ್ಚಿನ ಆಸಕ್ತಿ ಮೂಡುವಂತಾಗಿದ್ದು ಇಲ್ಲಿನ ಶಾಸನ, ದೇವಾಲಯಗಳು, ಸಾಂಸ್ಕೃತಿಕ ಚಟುವಟಿಕೆಗಳನ್ನು ಅಧ್ಯಯನ ಮಾಡುವ ಹಾಗೂ ಪ್ರತ್ಯಕ್ಷವಾಗಿ ಪರಿಶೀಲಿಸುವ ಅವಕಾಶ ದೊರೆತಿದ್ದು ನನ್ನ ಭಾಗ್ಯ.

ಕರ್ನಾಟಕ ವಿಶ್ವವಿದ್ಯಾಲಯದ ಎಂ.ಎ ಪದವಿಯನ್ನು ಪ್ರಥಮ ವರ್ಗದಲ್ಲಿ ಉತ್ತೀರ್ಣನಾಗಿ ರಾಷ್ಟ್ರೀಯ ಉಪನ್ಯಾಸಕರ ಅರ್ಹತಾ ಪರೀಕ್ಷೆಯ ರಾಜ್ಯ ಮಟ್ಟದ ಎಸ್.ಎಲ್.ಇ.ಟಿ ಉತ್ತೀರ್ಣನಾಗಿ ಶಿಕ್ಷಕ ವೃತ್ತಿಯ ಜೊತೆಗೆ ಹವ್ಯಾಸಿ ಬರಹಗಾರನಾಗಿ ಪಿಎಚ್.ಡಿ. ಮಾಡುವ ಹಂಬಲದಿಂದ ಹಾರೂಗೇರಿಯ ಬಿ.ಆರ್.ದರೂರ ಶಿಕ್ಷಣ ಸಂಸ್ಥೆಯ ಕನ್ನಡ ವಿಶ್ವವಿದ್ಯಾಲಯ ಹಂಪಿಯ ಅಧ್ಯಯನ ಸಂಸ್ಥೆಗೆ ಭೇಟಿ ಕೊಟ್ಟಾಗ ಡಾ. ವಿ.ಎಸ್.ಮಾಳಿಯವರು ಮೊದಲು ಎಂ.ಫಿಲ್ ಮಾಡು ನಂತರ ಆ ಅನುಭವವೇ ಪಿಎಚ್.ಡಿ. ಮಾಡಲು ನಾಂದಿಯಾಗುತ್ತದೆ ಎಂದು ಪ್ರೋತ್ಸಾಹದ ಮಾತುಗಳನ್ನಾಡುವ ಮೂಲಕ ಎಂ.ಫಿಲ್ ಪರೀಕ್ಷೆಯ ಪೂರ್ವ ಪರೀಕ್ಷೆಗೆ ಅರ್ಜಿ ಸಲ್ಲಿಸಲು ಅವಕಾಶವಿತ್ತರು.

ಎಂ,ಫಿಲ್ ಪೂರ್ವ ಪರೀಕ್ಷೆ ಆಯಿತು. ನಂತರ ಅಧ್ಯಯನ ಆರಂಭವಾಗಿ ಕೆಲವು ತಿಂಗಳು ಗತಿಸುವಷ್ಟರಲ್ಲಿ ಮುಖ್ಯ ಪರೀಕ್ಷೆಯೂ ಜರುಗಿತು. ಅದೂ ಕೂಡ ಕನ್ನಡ ವಿಶ್ವವಿದ್ಯಾಲಯದಲ್ಲಿಯೇ ಅದನ್ನು ಹತ್ತಿರದಿಂದ ನೋಡುವ ಸೌಭಾಗ್ಯ ಜೊತೆಗೆ ಮೌಖಿಕ ಪರೀಕ್ಷೆ ಡಾ.ಎಸ್.ರವೀಂದ್ರನಾಥ ಹಾಗೂ ಖ್ಯಾತ ಬರಹಗಾರರಾದ ಡಾ.ರಹಮತ್ ತರೀಕೆರೆಯವರ ಪ್ರಶ್ನೆಗಳನ್ನು ಎದುರಿಸಿ ಎರಡರಲ್ಲಿಯೂ ಉತ್ತೀರ್ಣತೆ ಪಡೆದು ಅಧ್ಯಯನ ಪ್ರಬಂಧ ಮಂಡಿಸಲು ಅಣಿಯಾದಾಗ ಡಾ. ವಿ.ಎಸ್.ಮಾಳಿಯವರು ತಾವೇ ನನಗೆ ಮಾರ್ಗದರ್ಶಕರಾಗಲು ಒಪ್ಪಿ "ಮುನವಳ್ಳಿ : ಒಂದು ಸಾಂಸ್ಕೃತಿಕ ಅಧ್ಯಯನ" ಶೀರ್ಷಿಕೆಯಡಿ ನನ್ನ ನೆಲೆಗೆ ಕಾರಣವಾದ ಸ್ಥಳದ ಇತಿಹಾಸ ಕಟ್ಟಿಕೊಡುವ ಕಾರ್ಯಕ್ಕೆ ಅವಕಾಶ ಒದಗಿಸಿದ್ದು ನನ್ನ ಸಂತಸವನ್ನು ಇಮ್ಮಡಿಗೊಳಿಸಿತು. ಹೀಗೆ ಹಲವು ಪ್ರೇರಣೆಗಳ ಕಾರಣದಿಂದ ಈ ನನ್ನ ಅಧ್ಯಯನ ಸಾಕಾರಗೊಂಡಿದೆ.

### 1.2. ಅಧ್ಯಯನದ ವ್ಯಾಪ್ತಿ

ಮುನವಳ್ಳಿಯ ಶಾಸನಗಳು ಮೊದಲಿನಿಂದಲೂ ಇತಿಹಾಸಕಾರರ ಗಮನ ಸೆಳೆದಿವೆ. ಬ್ರಿಟಿಷ ಆಳ್ವಿಕೆಯ ಕಾಲಕ್ಕೂ ಕೂಡ ಇದು ಮನೋಲಿ ಎಂದು ಕರೆಸಿಕೊಂಡಿದ್ದು ಚರಿತ್ರೆಯ ಪುಟದಲ್ಲಿ ಮುನವಳ್ಳಿ ಮುನಿಗಳ ಹಳ್ಳಿ,ಮುನಿಪಳ್ಳಿಯಾಗಿ ಧಾರ್ಮಿಕ ಕೇಂದ್ರವಾಗಿ ಹೆಸರು ಪಡೆದು ಇಲ್ಲಿನ ಪಂಚಲಿಂಗೇಶ್ವರದೇವಾಲಯ, ಕೈವಲ್ಯಾಶ್ರಮಸ್ವಾಮಿಮಠ, ಸೋಮಶೇಖರಮಠ, ಆಲೂರಮಠ, ವಿಠೋಭಾಮಂದಿರ. ವೆಂಕಟೇಶ್ವರ ದೇವಾಲಯ, ಶ್ರೀ ರೇಣುಕಾ ಸಕ್ಕರೆ ಕಾರ್ಖಾನೆ ಮಲಪ್ರಭಾ ನದಿ.ಮೊದಲಾದವುಗಳು ತನ್ನದೇ ಆದ ಇತಿಹಾಸವನ್ನು ಸಾರುತ್ತಿವೆ. ಮುನವಳ್ಳಿಯ ಜನಸಂಖ್ಯೆ 11357 ಪುರುಷರು 10751 ಮಹಿಳೆಯರಿದ್ದು ಒಟ್ಟು 22108 ಜನಸಂಖ್ಯೆ(2011ರ ಜನಗಣತಿ) ಹೊಂದಿದ್ದು ಸುತ್ತಲೂ ಕಡಕೋಳ ಎಕ್ಕೇರಿ, ಸಿಂದೋಗಿ. ಯರಗಟ್ಟಿ. ಯಕ್ಕುಂಡಿ, ಕಲ್ಲೋಳಿ ಸವದತ್ತಿ ಗ್ರಾಮಗಳನ್ನು ಹೊಂದಿದೆ,ಅಷ್ಟೇ ಅಲ್ಲದೇ ಜಿಲ್ಲೆಯಲ್ಲಿಯೇ ಅತೀ ದೊಡ್ಡ ಗ್ರಾಮ ಪಂಚಾಯತಿಗಳಲ್ಲಿ ಎರಡನೆಯ ಸ್ಥಾನ ಹೊಂದಿದೆ. ಮೊದಲನೆಯದು ಹಾರೂಗೇರಿ ಎರಡನೆಯ ದೊಡ್ಡ ಗ್ರಾಮ ಪಂಚಾಯತಿ ಹೊಂದಿದ ಮುನವಳ್ಳಿ.ಇತ್ತೀಚಿನ ವರ್ಷಗಳಲ್ಲಿ ಎಲ್ಲ

ರಂಗಗಳಲ್ಲಿಯೂ ಖ್ಯಾತಿ ಹೊಂದುತ್ತಿರುವ ಮುನವಳ್ಳಿ ತಾಲೂಕ ಆಗಬೇಕೆಂದು "ಮುನವಳ್ಳಿ ತಾಲೂಕ ಹೋರಾಟ ಸಮೀತಿ" ರಚನೆಯಾಗಿ ತಾಲೂಕ ಕೇಂದ್ರಕ್ಕಾಗಿ ಹೋರಾಟ ನಡೆಸುತ್ತಿರುವ ಗ್ರಾಮ.

ಬದಾಮಿ ಚಾಳುಕ್ಯರ ಕಾಲದಿಂದ ಅಂದರೆ ಹೂಲಿ ಮತ್ತು ಪರಸಗಡಕ್ಕೆ ಬಾದಾಮಿ ಚಾಲುಕ್ಯರ ಸಂಬಂಧ ಮತ್ತು ಮುನವಳ್ಳಿ ಸಮೀಪದ ಎಕ್ಕೇರಿ ವರವಿಕೊಳ್ಳದಲ್ಲಿ ದೊರೆತಿರುವ ಬಂಡೆಗಲ್ಲಿನಲ್ಲಿನ ಶಾಸನದ ಆಧಾರಗಳು ಮುನವಳ್ಳಿ ಚಾಳುಕ್ಯರ ಕಾಲದಿಂದಲೂ ತನ್ನದೇ ಇತಿಹಾಸ ಹೊಂದಿದೆ ಎಂಬುದನ್ನು ದೃಢೀಕರಿಸುತ್ತವೆ. ಅಂದರೆ ಇಲ್ಲಿನ ಜನವಸತಿ ಅಲ್ಲಿನ ಸಾಮಂತರೊಂದಿಗೆ ಸಂಬಂಧ ಹೊಂದಿದ್ದು ನಂತರ ರಾಷ್ಟ್ರಕೂಟರು ಸೊಗಲ ನೇಸರಗಿ ಪ್ರದೇಶಗಳಲ್ಲಿ ತಮ್ಮ ವಾಸ್ತುಶಿಲ್ಪ ಶೈಲಿಯ ದೇವಾಲಯ ಸ್ಥಾಪಿಸಿವ ಮೂಲಕ ಸವದತ್ತಿ ರಟ್ಟರು ರಾಷ್ಟ್ರಕೂಟರು ಮತ್ತು ಕಲ್ಯಾಣ ಚಾಳುಕ್ಯರೊಂದಿಗೆ ಹೊಂದಿದ ಸಾಮಂತ ಸಂಬಂಧ ಈ ಭಾಗದಲ್ಲಿ ಸಂಪರ್ಕ ಸಾಧಿಸಿತ್ತು.

ಕಲ್ಯಾಣ ಚಾಳುಕ್ಯರ ಆಳ್ವಿಕೆಯಲ್ಲಿ ಎರಡನೇ ಸೋಮೇಶ್ವರನ ರಾಣಿ ಸುಗ್ಗಲೆಯು ದಾಸಿಮಯ್ಯನ ಶಿಷ್ಯೆಯಾಗಿದ್ದು ಶಿವಭಕ್ತೆಯಾಗಿದ್ದಳು.ಈ ಕಾಲಘಟ್ಟದಲ್ಲಿ ಅವಳ ಪ್ರಭಾವಕ್ಕೆ ಒಳಗಾಗಿ ಸೋಮೇಶ್ವರನೂ ಶೈವಧರ್ಮಕ್ಕೆ ಒಲಿದನು.ಇವರ ಕಾಲದಲ್ಲಿ ಶೈವ ಮತ್ತು ಕಾಳಾಮುಖಪಂಥ ದೇವಾಲಯಗಳು ಈ ಭಾಗದಲ್ಲಿ ಹೆಚ್ಚು ನಿರ್ಮಾಣಗೊಂಡವು.ಅವುಗಳಲ್ಲಿ ಸೊಗಲ ಸೋಮೇಶ್ವರ. ಹೂಲಿ ಹಾಗೂ ಮುನವಳ್ಳಿಯ ಪಂಚಲಿಂಗೇಶ್ವರ,ಕಾಕತಿಯ ಸಿದ್ದೇಶ್ವರ,ಮೊದಲಾದವುಗಳು. ಸೌಂದತ್ತಿ ರಟ್ಟರ ಉತ್ತರಾಧಿಕಾರಿಗಳಾದ ಸೇವುಣರು ಅಥವ ಯಾದವರು ಗೋವೆಯ ಕದಂಬರನ್ನು ಸೋಲಿಸಿ ಬೆಳಗಾವಿ ಜಿಲ್ಲೆಯ ವಿವಿಧ ಭಾಗಗಳನ್ನು ಆಳತೊಡಗಿದರು.ಇಮ್ಮಡಿ ಸಿಂಘಣನ ಪ್ರಾಂತ್ಯಾಧಿಕಾರಿಯಾಗಿದ್ದ ಜಗದೇವನು ಮುನವಳ್ಳಿಯಲ್ಲಿ ಅಗ್ರಹಾರ ಶಿವಪುರವನ್ನು ಸ್ಥಾಪಿಸಿದ ಬಗ್ಗೆ 1222 ರ ಶಾಸನ ತಿಳಿಸುತ್ತದೆ. ಹೀಗೆ ಚಾಳುಕ್ಯರಿಂದ ಹಿಡಿದು ದೇವಗಿರಿಯ ಯಾದವರವರೆಗೂ ನಂತರ ಬಂದ ವಿಜಯನಗರ ಅರಸರು(ತೊರಗಲ್ ನಾಡಿನ ಸಂಪರ್ಕ).ಮರಾಠರು.ದೇಸಾಯಿ ಮನೆತನಗಳು, ಕಿತ್ತೂರಿನ ಸಂಪರ್ಕ, ಬ್ರಿಟಿಷರು ಕೋಟೆ ವಶಪಡಿಸಿಕೊಳ್ಳುವವರೆಗೂ ಮುನವಳ್ಳಿ ತನ್ನದೇ ಆದ ಚಾರಿತ್ರಿಕ ಹಿನ್ನಲೆ ಹೊಂದಿದೆ.

ಸಮಾಜದಲ್ಲಿ ಶಾಂತಿ, ಸಾಮರಸ್ಯ, ಸಾಮೂಹಿಕ ಪ್ರಜ್ಞೆ, ಸಹಕಾರ ಭಾವ, ಒಗ್ಗಟ್ಟು, ಬದುಕಿಗೆ ನೆಮ್ಮದಿ ಮುಂತಾದವು ಸಾಂಸ್ಕೃತಿಕ ಸಂಪ್ರದಾಯಗಳ ಪ್ರತಿಫಲವಾಗಿದೆ. ಇವು ಹಿಂದಿನ ಸಾಂಸ್ಕೃತಿಯ ಸಂಕೇತಗಳೂ ಹೌದು. ಆದರೂ ಇವುಗಳನ್ನು ಕುರಿತು ಈ ವರೆಗೆ ಒಂದಿಷ್ಟು ಲೇಖನಗಳು ವಿವಿಧ ಪತ್ರಿಕೆಗಳಲ್ಲಿ ಪ್ರಕಟವಾಗಿವೆಯೇ ಹೊರತು ಸಮಗ್ರ ಅಧ್ಯಯನವಾಗಿರಲಿಲ್ಲ. ಈಗ ಡಾ. ವಿ.ಎಸ್.ಮಾಳಿಯವರು ಅದನ್ನು ದಾಖಲಿಸುವ ಮೂಲಕ ಮುನವಳ್ಳಿ ಸಾಂಸ್ಕೃತಿಕ ಅದ್ಯಯನವನ್ನು ಸಾಕಾರಗೊಳಿಸಲು ಅವಕಾಶ ನೀಡಿದ್ದು ಸ್ವತಃ ಕ್ಷೇತ್ರ ಕಾರ್ಯಗಳ ಮೂಲಕ ವಿಷಯ ಸಂಗ್ರಹಿಸಿ ಅಧ್ಯಯನ ಮಾಡಲಾಗಿದೆ.

ಮುನವಳ್ಳಿ ಒಂದು ಸಾಂಸ್ಕೃತಿಕ ಅಧ್ಯಯನ ಬಗ್ಗೆ ನನ್ನ ಮಾರ್ಗದರ್ಶಕರೊಡನೆ ಚರ್ಚಿಸಿದಾಗ ಮತ್ತು ಪ್ರಕಟಿತ ಶಾಸನಗಳನ್ನು ಗಮನಿಸಿದಾಗ ನನ್ನ ಅಧ್ಯಯನಕ್ಕೆ ಒಂದು ಸೀಮಿತ ಚೌಕಟ್ಟನ್ನು ಹಾಕಿಕೊಳ್ಳಬೇಕಾಯಿತು. ಮೊದಲನೆಯದ್ದು ಶಾಸನ ಪರಿಚಯ, ಎರಡನೆಯದ್ದು ಮುನವಳ್ಳಿಯಲ್ಲಿನ ಸಾಂಸ್ಕೃತಿಕ ಪರಂಪರೆಯ ಪರಿಚಯ ಹೀಗೆ ಎರಡನ್ನು ಒಟ್ಟಾಗಿ ಮುನವಳ್ಳಿಯ ಸಾಂಸ್ಕೃತಿಕ ಅಧ್ಯಯನಕ್ಕೆ ಬೆಳಕು ಚೆಲ್ಲುವ ಲಿಖಿತರೂಪ ಮತ್ತು ಛಾಯಾಚಿತ್ರಗಳ ರೂಪದಲ್ಲಿ ದಾಖಲಿಸಲು ಅನುಕೂಲವಾಗಿದೆ. ಬೆಳಗಾವಿ ಜಿಲ್ಲೆಯಲ್ಲಿ ಮುನವಳ್ಳಿ ಹೆಸರಿನ ನಾಲ್ಕು ಊರುಗಳಿವೆ. ಚಿಕ್ಕೋಡಿ ತಾಲೂಕು, ಹುಕ್ಕೇರಿ ತಾಲೂಕು, ಖಾನಾಪೂರ ತಾಲೂಕು ಹಾಗೂ ಸವದತ್ತಿ ತಾಲೂಕುಗಳಲ್ಲಿರುವ ಈ ಊರುಗಳು ತಮ್ಮದೇ ಆದ ಐತಿಹ್ಯದಿಂದ ಹೆಸರಾಗಿದ್ದು ಎಲಿ ಮುನವಳ್ಳಿ, ನಾಗರ ಮುನವಳ್ಳಿ, ಹಿರೇ ಮುನವಳ್ಳಿ, ಮುನವಳ್ಳಿ ಹೀಗೆ ಅವುಗಳ ಹೆಸರು ಹೊಂದಿದ್ದು ನಮ್ಮ ಊರು ಮುನವಳ್ಳಿ ಎಂಬುದು ಸವದತ್ತಿ ತಾಲೂಕಿನಲ್ಲಿದ್ದು ತಾಲೂಕಿನಿಂದ 16 ಕಿ.ಮೀ ಅಂತರದಲ್ಲಿದೆ. ಇದು ಮಲಪ್ರಭಾ ನದಿ ದಡದಲ್ಲಿರುವ ಪಂಚಲಿಂಗೇಶ್ವರ ದೇವಾಲಯ ಹಾಗೂ ರಾಜ್ಯ ಹಾಗೂ ರಾಷ್ಟ್ರಮಟ್ಟದಲ್ಲಿ ಹೆಸರುವಾಸಿಯಾದ ರೇಣುಕಾ ಸಕ್ಕರೆ ಕಾರ್ಖಾನೆಯ ಮೂಲಕ ತನ್ನದೇ ಖ್ಯಾತಿಯನ್ನು ಹೊಂದಿದ ಗ್ರಾಮ. ಮುನವಳ್ಳಿ ಸುತ್ತಲಿನ ಹತ್ತಿರದ ಸ್ಥಳಗಳೆಂದರೆ ಸವದತ್ತಿ 16 ಕಿ.ಮೀ. ನರಗುಂದ 30 ಕಿ.ಮೀ.ರಾಮದುರ್ಗ 30 ಕಿ.ಮೀ. ಬೈಲಹೊಂಗಲ 36 ಕಿ.ಮೀ. ಯರಗಟ್ಟಿ 16 ಕಿ.ಮೀ ಹೀಗೆ ತನ್ನ ಸುತ್ತಲೂ ಪ್ರಮುಖ ಸ್ಥಳಗಳನ್ನು ಹೊಂದಿ ಸಂಕೇಶ್ವರ-ನರಗುಂದ ರಸ್ತೆಯಲ್ಲಿ ನಿತ್ಯವೂ ಸಾಕಷ್ಟು ಸಾರಿಗೆ ಸಂಪರ್ಕ ಹೊಂದಿರುವ ಸ್ಥಳವಾಗಿದೆ.

**1.3 ಅಧ್ಯಯನದ ಸ್ವರೂಪ**

'ಮುನವಳ್ಳಿ: ಒಂದು ಸಾಂಸ್ಕೃತಿಕ ಅಧ್ಯಯನ'ವು ಒಟ್ಟು ಐದು ಅಧ್ಯಾಯಗಳಲ್ಲಿ ಹರಡಿದೆ. ಮೊದಲನೆಯ ಅಧ್ಯಾಯ ಅಧ್ಯಯನದ ಉದ್ದೇಶ, ವ್ಯಾಪ್ತಿ ಮತ್ತು ಸ್ವರೂಪವನ್ನು ಒಳಗೊಂಡಿದೆ. ಮುನವಳ್ಳಿ ಗ್ರಾಮದ ಹಿನ್ನಲೆ ಅಧ್ಯಯನದ ಅವಶ್ಯಕತೆ,ಈ ವರೆಗೆ ಮುನವಳ್ಳಿ ಕುರಿತು ಬಂದಿರುವ ಬರಹಗಳು ಹೇಳಿಕೆಗಳು ದಂತಕಥೆಗಳ ವಿವೇಚನೆ ಇವುಗಳ ವಿವರವಿದೆ.

ಎರಡನೆಯ ಅಧ್ಯಾಯ "ಮುನವಳ್ಳಿಯ ಚಾರಿತ್ರಿಕ ಅಧ್ಯಯನ"ವಾಗಿದ್ದು. ಇತಿಹಾಸ ಕಾಲದಿಂದಲೂ ಇಲ್ಲಿನ ಚರಿತ್ರೆ ಅಡಕವಾಗಿದ್ದು. ಮುನಿಗಳ ಹಳ್ಳಿ ಎಂಬುದಕ್ಕೆ ಅನೇಕ ಮುನಿಚರಿತರ ಕುರಿತು ಪ್ರಕಟಿತ ಗ್ರಂಥಗಳಲ್ಲಿ ಮುನವಳ್ಳಿಯ ವಿವರ ಇದ್ದು. ಈ ಹಿನ್ನಲೆಯಲ್ಲಿ ಚಾರಿತ್ರಿಕ ಅಧ್ಯಯನ ಮಾಡಲಾಗಿದೆ.

ಮೂರನೆಯ ಅಧ್ಯಾಯ "ಮುನವಳ್ಳಿಯ ದೇವಾಲಯಗಳು' ಐತಿಹಾಸಿಕ ಶಿಲಾಶಾಸನ ಒಳಗೊಂಡಂತೆ ಇಲ್ಲಿ ನಿರ್ಮಾಣವಾದ ದೇವಾಲಯಗಳಿಂದ ಹಿಡಿದು ಸದ್ಯದ ಸ್ಥಿತಿಯಲ್ಲಿಯೂ ಪ್ರಚಲಿತದಲ್ಲಿರುವ ದೇವಾಲಯಗಳು ಅವುಗಳಲ್ಲಿನ ವೈಶಿಷ್ಟ್ಯತೆಯನ್ನು ಪರಿಚಯಿಸುವ ಜೊತೆಗೆ ಶಾಸನಗಳಲ್ಲಿ ಮುನವಳ್ಳಿ ಕುರಿತ ವಿವರಣೆಯ ಹಿನ್ನಲೆಯಲ್ಲಿ ಅದರ ಮಹತ್ವ ಮುನವಳ್ಳಿ

ಹಾಗೂ ಇತರ ಸ್ಥಳಗಳಿಗೂ ಹೊಂದಿರುವ ಸಂಬಂಧ ಇತ್ಯಾದಿಯಾಗಿ ದೇವಾಲಯಗಳ ವಾಸ್ತುಶಿಲ್ಪ ಹಿನ್ನಲೆಯಾದಿಯಾಗಿ ದೇವಾಲಯಗಳ ಕುರಿತು ತಿಳಿಸಿಕೊಡಲಾಗಿದೆ.

ನಾಲ್ಕನೆಯ ಅಧ್ಯಾಯವು"ಸಾಂಸ್ಕೃತಿಕ ಚಟುವಟಿಕೆಗಳು"ಅಂದರೆ ಮುನವಳ್ಳಿ ಒಂದು ಧಾರ್ಮಿಕ ಕೇಂದ್ರವಾಗಿ ಬ್ರಹ್ಮಪುರಿ ಎಂದು ಹೆಸರು ಪಡೆದಿದ್ದು, ಇಲ್ಲಿ ಅನೇಕ ಸಾಂಸ್ಕೃತಿಕ ಚಟುವಟಿಕೆಗಳು ಜರುಗುತ್ತಿವೆ. ಮಂಗಳ ಕಲಾ ಸಾಹಿತ್ಯ ವೇದಿಕೆ, ಲಯನ್ಸ ಕ್ಲಬ್, ಜೈಂಟ್ಸ ಗ್ರುಪ್ ಚಟುವಟಿಕೆಗಳಲ್ಲದೇ ಮುನವಳ್ಳಿಯ ಆಲೂರಮಠದಲ್ಲಿ ಜರುಗುತ್ತಿರುವ ಶಿವಾನುಭವಗಳು. ಸೋಮಶೇಖರ ಮಠದಲ್ಲಿ ಜರುಗುತ್ತಿರುವ ಸಾಂಸ್ಕೃತಿಕ ಕಾರ್ಯಕ್ರಮಗಳು. ನಾಡಹಬ್ಬ.ವಿಜ್ಞಾನ ವೇದಿಕೆಯ ಚಟುವಟಿಕಗೆಳು. ದಿವಂಗತ ವಿ.ಪಿ.ಜೇವೂರ ಗುರುಗಳ ಸ್ಮರಣೋತ್ಸವ ಇತ್ಯಾದಿ ಹಿನ್ನಲೆಗಳಲ್ಲಿ ಸಾಂಸ್ಕೃತಿಕ ಚಟುವಟಿಕೆಗಳ ಸಮಗ್ರ ಪರಿಚಯವನ್ನು ಒದಗಿಸಲಾಗಿದೆ.

ಐದನೆಯ ಅಧ್ಯಾಯವು "ಸ್ಥಳೀಯ ಆಚರಣೆಗಳು ಮತ್ತು ನಂಬಿಕೆಗಳು"ಎಂಬುದು ಇಲ್ಲಿ ಮುನವಳ್ಳಿ ಗ್ರಾಮದಲ್ಲಿ ಮೊದಲಿನಿಂದಲೂ ಜರುಗುತ್ತಿರುವ ಜಾತ್ರೆಗಳು.ಜಾತ್ರೆಗೆ ಪೂರಕವಾಗಿ ಜರುಗುತ್ತಿರುವ ನಂಬಿಕೆಗಳನ್ನು ಆಯಾ ದೇವಾಲಯಗಳು ಹಬ್ಬ ಹರಿದಿನಗಳ, ಹಿಂದೂ ಮುಸ್ಲಿಂ ಭಾವೈಕ್ಯತೆಯ ಸಂಕೇತವಾದ ಮೋಹರಂ, ಇತ್ಯಾದಿ ಆಚರಣೆಗಳನ್ನು ಅವುಗಳಿಗೆ ಪೂರಕವಾದ ನಂಬಿಕೆಗಳನ್ನು ಪರಿಚಯಿಸಲಾಗಿದೆ.

ಈ ರೀತಿ ಮುನವಳ್ಳಿ ಒಂದು ಸಾಂಸ್ಕೃತಿಕ ಅಧ್ಯಯನವನ್ನು ಐದು ಅಧ್ಯಾಯಗಳಲ್ಲಿ ಐತಿಹಾಸಿಕ ಹಿನ್ನಲೆಯಿಂದ ಹಿಡಿದು ಪ್ರಸ್ತುತ ಸಂಗತಿಗಳವರೆಗೆ ತಿಳಿಸುವ ಜೊತೆಗೆ ಕೊನೆಯ ಅಧ್ಯಾಯ ಸಮಾರೋಪ ಅಧ್ಯಾಯವಾಗಿದ್ದು. ಈ ಪ್ರಬಂಧದ ಫಲಿತಗಳನ್ನು ಮುಂದಿನ ಅಧ್ಯಯನದ ಸಾಧ್ಯತೆಗಳನ್ನು ತಿಳಿಸುವ ಜೊತೆಗೆ ಕೊನೆಗೆ ಪೂರಕ ಅನುಬಂಧಗಳನ್ನು ನೀಡಲಾಗಿದೆ.

ಒಟ್ಟಾರೆಯಾಗಿ ಈ ಅಧ್ಯಯನ ಮುನವಳ್ಳಿಯ ಐತಿಹಾಸಿಕ ಪರಂಪರೆಯ ಜೊತೆಗೆ ಸಾಂಸ್ಕೃತಿಕ ಚಟುವಟಿಕೆಗಳು ಹಬ್ಬ ಹರಿದಿನಗಳು ಜಾತ್ರೆಗಳು ನಂಬಿಕೆಗಳ ಹಿನ್ನಲೆಯಲ್ಲಿ ಇದುವರೆಗೂ ಮುನವಳ್ಳಿಯನ್ನು ನೋಡಿರದ ಜೊತೆಗೆ ಈ ಹಿನ್ನಲೆಯಲ್ಲಿ ಪರಿಚಯಿಸದ ರೀತಿಯಲ್ಲಿ ಇಲ್ಲಿನ ಪ್ರತಿಯೊಂದು ಕಾರ್ಯಚಟುವಟಿಕೆಗಳನ್ನು ಅದರ ನೆಲೆ-ಬೆಲೆಗಳನ್ನು ವಿಸ್ತಾರವಾಗಿ ಚರ್ಚಿಸುವ ಮೂಲಕ ಹೊಸ ಪರಂಪರೆಗೆ ತೆರೆದುಕೊಳ್ಳುವ ಅಧ್ಯಯನ ಮಾಡುವ ಮೂಲಕ ಮುನವಳ್ಳಿ ಒಂದು ಸಾಂಸ್ಕೃತಿಕ ಅಧ್ಯಯನ ತನ್ನದೇ ಆದ ಚರಿತ್ರೆಯನ್ನು ಕಟ್ಟಿಕೊಡುವ ಪ್ರಯತ್ನ.



## ಅಧ್ಯಾಯ - ಎರಡು

# ಮುನವಳ್ಳಿಯ ಚಾರಿತ್ರಿಕ ಅಧ್ಯಯನ

ಬೆಳಗಾವಿ ಜಿಲ್ಲೆಯ ಸವದತ್ತಿ ತಾಲೂಕಿನ ಮುನವಳ್ಳಿ ಪ್ರಾಗೈತಿಹಾಸ ಕಾಲದಿಂದಲೂ ಪ್ರಮುಖ ಜನವಸತಿಯ ನೆಲೆಯಾಗಿತ್ತು ಎಂದು ಮಲಪ್ರಭಾ ನದಿದಡದಲ್ಲಿ ಸಿಕ್ಕಿರುವ ಉತ್ಖನನದಿಂದ ಸ್ಪಷ್ಟವಾಗಿದೆ. ನವಿಲುತೀರ್ಥ, ಸಿಂದೋಗಿ, ಸವದತ್ತಿ, ತಲ್ಲೂರು ಹೀಗೆ ಸುತ್ತ ಮುತ್ತಲು ಕಬ್ಬಿಣಯುಗ ಬೃಹತ್ ಶಿಲಾ ಸಂಸ್ಕೃತಿ ಇತ್ತೆಂದು ಪುರಾತತ್ವ ಶಾಸ್ತ್ರಜ್ಞರು ಅಧ್ಯಯನದ ಮೂಲಕ ಖಚಿತ ಪಡಿಸಿದ್ದು, ಕಲ್ಯಾಣಿ ಚಾಲುಕ್ಯರಿಂದ ಹಿಡಿದು ದೇವಗಿರಿ ಯಾದವರು ಮರಾಠರು.ವಿಜಯನಗರ ಅರಸರು.ತೊರಗಲ್ ನಾಡಿನ ಅರಸರಲ್ಲದೇ ದೇಸಾಯಿ ಮನೆತನಗಳು ಬ್ರಿಟಿಷ್ ಆಡಳಿತದ ಅವಧಿಯವರೆಗಿನ ಚಾರಿತ್ರಿಕ ಸಂಬಂಧವನ್ನು ಮುನವಳ್ಳಿ ಒಳಗೊಳ್ಳುವ ಮೂಲಕ ತನ್ನದೇ ಆದ ವೈಶಿಷ್ಟ್ಯವನ್ನು ಹೊಂದಿದೆ.

ಕದಂಬರು,ಚಾಲುಕ್ಯರು,ರಾಷ್ಟ್ರಕೂಟರು.ಮತ್ತು ಕಲ್ಯಾಣದ ಚಾಲುಕ್ಯರು ಈ ಭಾಗದ ಮೇಲೆ ಒಡೆತನ ನಡೆಸಿರುವುದನ್ನು ಕಲ್ಯಾಣ ಚಾಲುಕ್ಯರ ಕಾಲದಲ್ಲಿ ಇದ್ದ ಸವದತ್ತಿಯ ರಟ್ಟರು, ಗೋವೆಯ ಜಯಕೇಶಿ ಹಲಸಿ-12.000 ಕಂಪಣ ಪ್ರದೇಶಗಳನ್ನು ಆಳುತ್ತಿದ್ದ ಈ ಕಾಲಕ್ಕೆ ಮುನವಳ್ಳಿ ಕೂಡ ಇವರ ಅಧೀನಕ್ಕೆ ಬಂದಿದೆ.ದೇವಗಿರಿ ಯಾದವರ ಮನೆತನದ ಎರಡು ಶಾಸನಗಳು ಇಲ್ಲಿ ದೊರೆತಿರುವುದರಿಂದ ಇಲ್ಲಿನ ದೇವಾಲಯಗಳ ಜೀರ್ಣೋದ್ಧಾರದ ಜೊತೆಗೆ ಅವರೂ ಕೂಡ ಮುನವಳ್ಳಿಯನ್ನು ಪ್ರತಿನಿಧಿಸಿರುವರು.

ಕ್ರಿ.ಶ. 17 ನೆ ಶತಮಾನದ ಉತ್ತರಾರ್ಧದಲ್ಲಿ ಶಿವಾಜಿಯ ಪ್ರಾಬಲ್ಯದೊಂದಿಗೆ ಬೆಳಗಾವಿ, ಪರಸಗಡ, ಹೂಲಿ, ಹುಕ್ಕೇರಿ ಮತ್ತು ರಾಯಭಾಗಗಳಲ್ಲಿ ಮರಾಠ ಸರದಾರರು ನೆಲೆಸತೊಡಗಿದಾಗ ಪರಸಗಡಕ್ಕೆ ಭೇಟಿ ನೀಡುವ ಮರಾಠ ಸಾಮಂತರು ಮುನವಳ್ಳಿ ಕೋಟೆ ಅಂದರೆ ತೊರಗಲ್ ನಾಡಿನ ಅಧೀನದಲ್ಲಿದ್ದ ಮುನವಳ್ಳಿಗೆ ಭೇಟಿ ನೀಡುತ್ತಿದ್ದರು ಎಂಬುದನ್ನು ಇತಿಹಾಸದಿಂದ ತಿಳಿಯುತ್ತೇವೆ.

ಕಿತ್ತೂರಿನ ಚರಿತ್ರೆಯಲ್ಲಿ ಕಿತ್ತೂರು ಒಳಗೊಂಡ ದೇಸಾಯಿ ಮನೆತನಗಳ ಸಂಬಂಧಗಳಲ್ಲಿ ತಲ್ಲೂರು ಪ್ರಮುಖವಾದುದು.ಈ ದಿಸೆಯಲ್ಲಿ ಕಿತ್ತೂರಿನ ಅರಸರು ಕೂಡ ತಮ್ಮ ಸಂಬಂಧವನ್ನು ಮುನವಳ್ಳಿಯಲ್ಲಿ ಉಳಿಸಿಕೊಂಡಿದ್ದು ಕಿತ್ತೂರಿನ ಸಾಮ್ರಾಜ್ಯದಲ್ಲಿ ಮುನವಳ್ಳಿಯೂ ಒಂದಾಗಿತ್ತು.ನಂತರದ ಬ್ರಿಟಿಷರ ಕೈವಶದಲ್ಲಿದ್ದಾಗ "ದೋಂಡಜೀ ವಾಘ"ಎಂಬ ಹೋರಾಟಗಾರ ಮುನವಳ್ಳಿ ಕೋಟೆಯನ್ನು ಕೇಂದ್ರವಾಗಿರಿಸಿಕೊಂಡು ಹೋರಾಟ ಮಾಡಿರುವುದನ್ನು ಸ್ವಾತಂತ್ರ್ಯ ಹೋರಾಟದ ಇತಿಹಾಸ ಪುಟದಿಂದ ಕಾಣುತ್ತೇವೆ. ಅಂದರೆ ಅಂದಿನ ಸ್ವಾತಂತ್ರ್ಯ ಹೋರಾಟದಲ್ಲಿಯೂ ಕೂಡ ಮುನವಳ್ಳಿಯ ಹೋರಾಟಗಾರರ ಪಾತ್ರವೂ ಸ್ಮರಣೀಯವಾಗಿದೆ.

ಮಲಪ್ರಭಾ ನದಿಯ ಪವಿತ್ರತೆಯನ್ನು ಸಾರುವ ಕಥೆಯೊಂದು ಪುರಾಣಗಳಲ್ಲಿ ಇದೆಯೆಂದು ಇಲ್ಲಿನ ಹಿರಿಯರು ತಿಳಿಸುವರು. ಇಲ್ಲಿನ ಪಂಚಲಿಂಗೇಶ್ವರ ದೇವಾಲಯದ ಹಿಂದೆ ಅಂದರೆ ಮಲಪ್ರಭಾ ನದಿ ದಡದಲ್ಲಿ ಇರುವ ಲಿಂಗ ಅಲ್ಲಿ ನಡೆದ ದೃಷ್ಟಾಂತವನ್ನು ಇಂದಿಗೂ ತಿಳಿಸುವರು.

ಗೌತಮ ಮುನಿಗಳು ಇಲ್ಲಿನ ಸ್ಥಳದಲ್ಲಿ ಧ್ಯಾನಾಸಕ್ತರಾಗಿ ಕುಳಿತಿದ್ದರಂತೆ ಒಂದು ದಿನ ಆಕಾಶದಲ್ಲಿ ಕಾಗೆಯೊಂದು ಹಾರುತ್ತ ಬಂದು ನೀರಲ್ಲಿ ಮುಳುಗಿತಂತೆ ಮುಳುಗಿ ಮೇಲೇಳಲು ಅದರ ಬಣ್ಣ ಬೆಳ್ಳಗಾಯಿತಂತೆ ಮತ್ತೆ ಅದು ದಡದಲ್ಲಿ ಬಂದು ಕುಳಿತುಕೊಳ್ಳಲು ಕಪ್ಪಗಾಯಿತಂತೆ.

ಪುನಃ ಕಾಗೆ ನದಿಯಲ್ಲಿ ಮುಳುಗಿ ಮತ್ತೆ ದಡದಲ್ಲಿ ಬರಲು ಮತ್ತೆ ಬಿಳಿಯಾಗಿದ್ದುದು ಕಪ್ಪಗಾಯಿತಂತೆ ಹೀಗೆ ನಾಲ್ಕಾರು ಸಲ ಮುಳುಗಿ ಮೇಲೇಳಲು ಕೊನೆಗೆ ಬಿಳಿಯ ಬಣ್ಣದಿಂದ ಕಂಗೊಳಿಸುತ್ತ ದಡದಲ್ಲಿ ಕುಳಿತಾಗ ಗೌತಮ ಮಹರ್ಷಿಗಳಿಗೆ ಇದು ಆಶ್ಚರ್ಯ ಮತ್ತು ಸೋಜಿಗವನ್ನುಂಟು ಮಾಡಲು ಕೈಮುಗಿದು ತಾವು ಯಾರು.? ಎಂದು ಕೇಳಲು ಸ್ತ್ರೀ ರೂಪದಲ್ಲಿ ಗೋಚರಿಸಿದ ಮಹಿಳೆ " ನಾನು ಗಂಗಾಮಾತೆ" ಎಲ್ಲರೂ ನನ್ನಲ್ಲಿ ತಮ್ಮ ಕೊಳೆಯನ್ನು ತೊಳೆದು ತಾವು ಪವಿತ್ರರಾಗಿ ಹೋಗುತ್ತಿರಲು ನನ್ನ ಕೊಳೆಯ ತೊಳೆಯುವವರಾರೆಂದು ದೇವರಲ್ಲಿ ಕೇಳಲು ದಕ್ಷಿಣದಲ್ಲಿ ಮಲಾಪಹಾರಿ ಎಂಬ ಪುಣ್ಯಾಂಗನೆ ನದಿಯಾಗಿ ಹರಿಯುತ್ತಿದ್ದು ಮುನಿಪುರ ಎಂಬ ಸ್ಥಳದಲ್ಲಿ ಮಹಾತ್ಮರ ತಪೋ ಭೂಮಿಯ ಸ್ಥಳದಲ್ಲಿ ನೀನು ಹೋಗಿ ನಿನ್ನ ಮಲೀನತೆಯನ್ನು ತೊಡೆದು ಬಾ ಆ ಶಕ್ತಿ ಹೊಂದಿದ ಪುಣ್ಯಾಂಗನೆ ಮಲಪಾಹಾರಿ" ಎಂದು ತಿಳಿಸಲು ಈ ರೂಪದಲ್ಲಿ ಇಲ್ಲಿ ಬಂದು ನನ್ನ ಮಲೀನತೆಯನ್ನು ತೊಡೆದುಕೊಂಡೆ. ಇಂಥ ಸ್ಥಳದಲ್ಲಿ ತಮ್ಮಂಥಹ ಮಹರ್ಷಿಗಳು ತಪಸ್ಸು ಮಾಡುತ್ತಿರುವಿರಿ ಇದು ನಿಜಕ್ಕೂ ಪವಿತ್ರ ಭೂಮಿ. ಎಂದು ತಿಳಿಸಿ ಮಾಯವಾದಳಂತೆ ಹೀಗೆ ಇಲ್ಲಿ ಅನೇಕ ಮುನಿಗಳು ತಪಸ್ಸು ಮಾಡಿದ ತಪೋಭೂಮಿಯಾಗಿ ಮುನಿಪುರ, ಮುನಿಂದ್ರವಳ್ಳಿ ಮುನವಳ್ಳಿ ಮಲಪ್ರಭಾ ನದಿಯ ದಂಡೆಯ ಮೇಲೆ ನೆಲೆನಿಂತಿರುವುದು.

ಇನ್ನು ಅರಿಬೆಂಚಿಯವರ ಬಾವಿಗೆ ಹಾರ ನಾಟಕದಲ್ಲಿ ಮಲಪ್ರಭಾ ನದಿ ಕುರಿತು ಬರುವ ಕೊನೆಯ ಸನ್ನಿವೇಶದಲ್ಲಿ ಮಲ್ಲಮ್ಮ ನದಿಯಾಗಿ ಹರಿಯತೊಡಗಿದಾಗ ಆಕೆಯ ಮಾವ ಅವಳನ್ನು ಕೂಗುತ್ತ ದಾರಿಯುದ್ದಕ್ಕೂ ಅವಳು ಎಲ್ಲಿ ತನ್ನ ಪ್ರತಿಕ್ರಿಯೆ ವ್ಯಕ್ತಪಡಿಸುವಳೋ ಅಲ್ಲಿ ಒಂದೊಂದು ಕಲ್ಲನ್ನು ನೆಡುತ್ತ ಬಂದನು ಎಂಬ ಅಂಶ ಉಲ್ಲೇಖವಿದೆ. ಮುನವಳ್ಳಿಯ ನದಿ ದಂಡೆಯಲ್ಲಿ 12 ಲಿಂಗಗಳಿವೆ. ಅಂದರೆ ಕಲ್ಲೋಳಿ ಗ್ರಾಮದಿಂದ ಮುನವಳ್ಳಿ ಕೋಟೆಯ ಹತ್ತಿರದವರೆಗೂ ಅಲ್ಲಲ್ಲಿ ಈ ಲಿಂಗಗಳು ಕಂಡುಬರುತ್ತವೆ.[1]

ಇನ್ನು ಪಂಚಲಿಂಗೇಶ್ವರ ದೇವಾಲಯದ ಪಂಚಲಿಂಗಗಳ ಸ್ಥಾಪನೆಯ ಕುರಿತೂ ಕಥೆಯೊಂದನ್ನು ಹಿರಿಯರು ಹೇಳುವರು.ಅಗಸ್ತ್ಯ ಮುನಿಗಳು ತಪಸ್ಸಿಗೆಂದು ಕಾಶಿಗೆ ತೆರಳಿದಾಗ ಅವರ ಸ್ವಪ್ನದಲ್ಲಿ ಪರಶಿವನು ಗೋಚರಿಸಿ "ಜಮದಗ್ನಿ, ವಿಭಾಂಡು, ಅತ್ರಿ, ವಶಿಷ್ಠರಂತಹ ಮುನಿಗಳ ತಪೋಭೂಮಿ ಮಲಪ್ರಭೆಯ ದಡವಾಗಿದ್ದು ಅಲ್ಲಿ ಹೋಗಿ ತಪಸ್ಸನ್ನಾಚರಿಸಿ ಪಂಚಭೂತಗಳಲ್ಲಿ ನಿಮಗೆ ಪ್ರತ್ಯಕ್ಷನಾಗುವೆನು ಹೋಗಿ ಅಲ್ಲಿಯೇ ನನ್ನನ್ನು ಆರಾಧಿಸಿ ನಿಮ್ಮಿಂದ ಲೋಕಕಲ್ಯಾಣವಾಗಲಿ" ಎಂಬಂತೆ ಸ್ವಪ್ನವಾಗಲು ಅಗಸ್ತ್ಯ ಮುನಿಗಳು ಈ ತಾಣಕ್ಕೆ ಆಗಮಿಸಿದರಂತೆ ನಂತರ ಇಲ್ಲಿಯೇ ತಪಸ್ಸನ್ನಾಚರಿಸಿ ಪಂಚಭೂತಗಳ ತತ್ವಗಳನ್ನು ಹೊಂದಿದ ಅಂದರೆ

1. ಕವರಿ ಚಿದಂಬರ, ಸರದೇಶಪಾಂಡೆ – ಸಂದರ್ಶನ, 2–3–2013, ವಯಸ್ಸು 72

ಅಗ್ನಿ,ವಾಯು,ಭೂಮಿ,ಆಕಾಶ,ತೇಜ ಹೀಗೆ ಐದು ಲಿಂಗಗಳನ್ನು ಪ್ರತಿಷ್ಠಾಪಿಸಿ ಪಂಚಲಿಂಗಗಳ ಪೂಜಿಸಿದರೆಂಬುದು ದೃಷ್ಟಾಂತ. ಪಂಚಲಿಂಗೇಶ್ವರ ದೇವಾಲಯದ ಗರ್ಭಗೃಹದಲ್ಲಿ ಇಂದಿಗೂ ಕೂಡ ಪಂಚಲಿಂಗಗಳ ನಡುವಿನ ಲಿಂಗದ ಹಿಂದೆ ನೇರವಾಗಿ ಚಿಕ್ಕದಾದ ಋಷಿಯ ಮೂರ್ತಿ ಇರುವುದನ್ನು ಕಾಣುತ್ತೇವೆ ಅಂದರೆ ಅವುಗಳ ಸ್ಥಾಪಕ ಮುನಿ ಎಂಬುದು ಕುರುಹು.ಎಂದು ಹಿರಿಯರು ಪಂಚಲಿಂಗೇಶ್ವರ ದೇವಾಲಯದ ಸ್ಥಾಪನೆಯ ಕುರಿತು ಹೇಳುವ ಕಥೆ.ಇಂದಿಗೂ ಜಾತ್ರೆ ಸಂದರ್ಭದಲ್ಲಿ ಗ್ರಾಮದೊಳಗಿಂದ ವ್ಯಾಸ ಮಹರ್ಷಿಯ ತೋಳುಗಳ ಮೆರವಣಿಗೆಯೊಂದಿಗೆ ದೇವಾಲಯದವರೆಗೂ ಆಗಮಿಸಿ ನಂತರ ರಥೋತ್ಸವ ಜರುಗಿಸುತ್ತಿರುವುದು ಇದಕ್ಕೆ ನಿದರ್ಶನ.

ಮುನವಳ್ಳಿ ಮುನಿಪುರ ಎಂಬುದಕ್ಕೆ ಇಲ್ಲಿರುವ ಮಠಗಳು ಹಾಗೂ ಮಠಸ್ಥ ವಂಶಗಳನ್ನು ಹೊಂದಿದ ಮನೆತನಗಳೂ ಕಾರಣ. ಚಂದ್ರಶೇಖರಮಠ. ಸಂಭಾಳಮಠ, ವಿರಕ್ತಮಠ, ಪಶುಪತಿಮಠ, ಸೋಮಶೇಖರಮಠ, ಕಲ್ಮಠ, ಸಾವಳಗಿಮಠ, ಚೌಕಿಮಠ, ಚುಳಕೀಮಠ, ಅಕ್ಕಮಹಾದೇವಿಮಠ, ಅಷ್ಟಗಿಮಠ, ಹಿರೇಮಠ, ಅನ್ನದಾನೇಶ್ವರಮಠ, ಸಾಲಿಮಠ, ಕಡಕೋಳಮಠ, ಆಲೂರಮಠ. ಹೀಗೆ ಅನೇಕ ಮಠಮಾನ್ಯಗಳ ನೆಲೆವೀಡು ಇದಾಗಿದ್ದು ಈ ಹೆಸರಿನ ಮನೆತನಗಳು ಇಂದಿಗೂ ಈ ಗ್ರಾಮದಲ್ಲಿ ವಾಸವಾಗಿರುವರು.ಇಲ್ಲಿ ಅನೇಕ ಮನೆಗಳ ಹಿತ್ತಲುಗಳಲ್ಲಿ ಬಾವಿಗಳನ್ನು ಹೊಂದಿದ್ದು ನದಿಮೂಲ ಜಲಮೂಲ ಹೊಂದಿದ ಈ ಸ್ಥಳ ನೂರೆಂಟು ಜಂಗಮ ಮನೆತನಗಳಿಂದಲೂ ನೂರೆಂಟು ಬಾವಿಗಳಿಂದಲೂ ಪ್ರಸಿದ್ಧವಾಗಿದೆ.

**2.1 ಪಂಚಲಿಂಗೇಶ್ವರ ದೇವಾಲಯದಲ್ಲಿನ ಶಾಸನ**

ಮುನವಳ್ಳಿ ಪಂಚಲಿಂಗೇಶ್ವರ ದೇವಾಲಯದಲ್ಲಿ ಲಭ್ಯವಾದ ಕ್ರಿ.ಶ.1222 ರ ಸೇವುಣ ಸಿಂಗಣದೇವನ ಶಾಸನವು ಮುನವಳ್ಳಿ ಗ್ರಾಮವನ್ನು "ಮುನಿಪುರಂ"ಎಂದು ಕರೆದಿದ್ದು ಅದರ ನೆಲೆಯನ್ನು ಈ ರೀತಿ ವರ್ಣಿಸಲಾಗಿದೆ.

"ವಾರಿಧಿವೇಷ್ಟಿತಮೆನಿಪೇಧಾರಿಣಿಗೆತಿಸೇಬ್ಯಮೇರುವಿಂದ ದಕ್ಷಿಣದೊಳು ಸಾರಂ ಜಂಬೂದ್ವೀಪದೊ ಳೋರಂತೆಸೆದೊಪ್ಪಿತೋರ್ಪ ಭರತಕ್ಷೇತ್ರಂ. ಭರತಾವನಿಗೊಪ್ಪುದು ಸುರುಚಿರ ದರ್ಮ್ಮೆಲ್ಲದಂತೆ ಕುಂತಳಕತಿವಿಸ್ತರಮೆನೆ ತೋರಗಲೆನಾಡಿನ ಸಿರೀಕರುವೆನಿಸಿದುದು ಮುನಿಪುರಂ ಕಡುರಮ್ಯಂ."[2] ಅದೇ ಮುನವಳ್ಳಿಯ ಕ್ರಿ.ಶ.1252 ರ ಸೇವುಣ ಕಂದರಾಯನ ಆಳ್ವಿಕೆಯ ಶಾಸನದಲ್ಲಿ –

"ಮಿರುಗುವ ನಂದನಾವಳಿಗಳಿಂ ಬೆಳದೊಪ್ಪುವ ಕೆಯ್ಯೊಲಂಗಳಿಂ
ತುರುಗಿದ ದೇವತಾಭವನದಿಂದೆಸೆದಿರ್ಪ ಸುವಸ್ತು ವರ್ಗ್ಗದಿಂ
ತೊರುಗಲೆಯಾರುಸಾಸಿರಮೆನಿಪ್ಪ ಸುದೇಸದೊಳುಳ್ಳುವೆತ್ತಣಂ
ಮೆರೆವ ಮುನೀಂದ್ರವಳ್ಳಿಗೆ ಸಮಂಬರೆ ಪತ್ತನಮುಂಟೆ ದಾತ್ರಿಯೊಳು

ಎಂದು ಮುನವಳ್ಳಿಯನ್ನು ಮುನೀಂದ್ರವಳ್ಳಿ ಎಂದು ಕರೆದು ವರ್ಣಿಸಲಾಗಿದೆ.

2. ಡಾ. ಕೆ. ಎಸ್. ಪಾಟೀಲ, "ಬೆಳಗಾವಿ ಜಿಲ್ಲೆಯ ಇತಿಹಾಸ ಮತ್ತು ಪುರಾತತ್ವ" ಸವದತ್ತಿ ತಾಲೂಕಿನ ಶಾಸನಗಳು, ಪುಟ – 126

ಈ ಮೇಲಿನ ಶಾಸನಗಳಲ್ಲಿ ದೇವಗಿರಿ(ಸೇವುಣರ) ಯಾದವರ ಕಾಲದ ಶಾಸನಗಳಲ್ಲಿ ತೊರಗಲೆನಾಡು, ತೊರಗಲೆಯಾರು ಸಾಸಿರ, ತೊರಗಲೆದೇಶ, ತೊರಗಲೆ ವಿಷಯ ಎಂಬ ಉಲ್ಲೇಖಗಳು ಕಂಡು ಬರುತ್ತವೆ. ರಾಮದುರ್ಗ ತಾಲೂಕಿನ ಮಲಪ್ರಭೆಯ ತಟದಲ್ಲಿನ ತೊರಗಲ್ ಗ್ರಾಮ ಈ ನಾಡಿನ ಕೇಂದ್ರಸ್ಥಳವಾಗಿತ್ತು ಎಂಬುದನ್ನು ಮೇಲಿನ ಆಧಾರದಿಂದ ಗುರುತಿಸಬಹುದು.

ಸೇವುಣರ ಕಾಲಕ್ಕೆ ತೊರಗಲ್ ನಾಡು ಹೆಚ್ಚು ವಿಸ್ತಾರಗೊಳ್ಳುತ್ತಿತ್ತು ಎಂಬುದು ಕಂಡುಬರುತ್ತದೆ.ಅದರಲ್ಲಿ ಮುನವಳ್ಳಿಯು ಸೇರ್ಪಡೆಯಾಗಿತ್ತು.ಈ ನಾಡಿನ ಈಶಾನ್ಯಕ್ಕೆ ತರ್ದವಾಡಿ-1000, ಆಗ್ನೇಯಕ್ಕೆ ಹಲಸಿಗೆ ನಾಡುಗಳು ಎಲ್ಲೆಗಳಾಗಿದ್ದವು.ಹಲಸಿಗೆ-12000 ಪ್ರದೇಶದಲ್ಲಿ ಮಲಪ್ರಭೆಯ ದಕ್ಷಿಣಕ್ಕಿರುವ ಖಾನಾಪೂರ ತಾಲೂಕಿನ ಪ್ರದೇಶವು ಸೇರ್ಪಡೆಯಾಗಿದ್ದಿತು ಎಂಬುದು ಜಿಲ್ಲೆಯಲ್ಲಿ ದೊರೆತೆ ಬೇರೆಬೇರೆ ಶಾಸನಗಳಿಂದ ತಿಳಿದುಬರುವ ಸಂಗತಿಯಾಗಿದೆ.

ಮುನವಳ್ಳಿ ಶಾಸನದಲ್ಲಿ ಮುನವಳ್ಳಿ ಗ್ರಾಮ ಮತ್ತು ಅಕ್ಕ ಪಕ್ಕದ ಗ್ರಾಮಗಳನ್ನು ಕೂಡ ಉಲ್ಲೇಖಿಸಿರುವುದನ್ನು ನಾವು ಕಾಣುತ್ತೇವೆ. ಬ್ರಹ್ಮಪುರಿ, ಹುಲಕುಂದ. ಸಿಂದವಿಗೆ(ಸಿಂದೋಗಿ) ಕಲ್ಲೋಳಿ, ಕಡಕೋಳ, ಗೊರವನೂರ(ಗೊರವನಕೊಳ್ಳ), ಜಂಗವಾಡ.ಮೊದಲೂರ(ಮದ್ಲೂರು) ಹೀಗೆ ಹಲವು ಗ್ರಾಮಗಳ ಹೆಸರನ್ನು ಉಲ್ಲೇಖಿಸುತ್ತ ಪುರುಷೋತ್ತಮನ ಅನುಜ ಜೋಗದೇವ ಅತ್ಯಂತ ಭಕ್ತಿಯಿಂದ ಪಂಚಲಿಂಗೇಶ್ವರ ನೆಲೆನಿಂತ ಪುಣ್ಯದ ತಾಣ ಮುನವಳ್ಳಿಯನ್ನು ಶಿವಪುರವಾಗಿಸಲು 16 ಶಿವಪುರ ವಿಪ್ರರಿಗೆ ದತ್ತಿ ಕೊಟ್ಟಿರುವನು.ಪ್ರತಿ ವಿಪ್ರರಿಗೆ ಪ್ರತ್ಯೇಕ ತಮ್ಮ 200 ರಂತೆ ಹಳೆಯ ಊರಿನ ಹದ್ದಿನಿಂದ ಸಿಂದವಿಗೆಯಲ್ಲಿ ನೂರು,ನಾಗಪುರದಲ್ಲಿ ಹದಿನಾರು,ವ್ಯಾಪ್ತಿಯನ್ನು ದ್ವಿಜರಿಗೆ ಬಿಟ್ಟುಕೊಡುವ ಮೂಲಕ ಮುನಿಪುರದ ತೋಟಿಗರು ವರ್ಷಂಪ್ರತಿ ಎಲೆಗಳು,ಗಾಣದ ಎಣ್ಣೆ,ಹೂವುಗಳು ಪ್ರತಿಯೊಂದು ದಾನ್ಯಗಳನ್ನು ಪೂಜಾ ಕಾರ್ಯ ಸಾಂಗವಾಗಿ ಸಾಗಲು ವಹಿಸಿಕೊಟ್ಟಿರುವ ಬಗ್ಗೆ ಶಾಸನದಲ್ಲಿ ವಿವರಣೆಯಿದೆ.

ಅಷ್ಟೇ ಅಲ್ಲ ಈ ಪ್ರದೇಶ "ಸಾಸ್ವತ ಲಕ್ಷ್ಮಿಯೊಳುಉನ್ನತಿರ್ಕೆ"ಪಡೆದ ತಾಣವೆನಿಸಿದೆ. "ಧನಕನಕಂಗಳಿಂದಮೆಸೆವ" ಭಕ್ತಿಯ ತಾಣವೆನಿಸಿದೆ."ವೇದಬ್ಯಾಸಕುತ್ಸರ್ಜಮದಗುಣಿ ವಶಿಷ್ಟಬ್ಯಾರದ್ವಾಜ" ಮೊದಲಾದ ಋಷಿಮುನಿಗಳ ತಪೋಬಾಗ್ಯದಿಂದ ಮುನಿಪುರ ಕೋಟಿತೀರ್ಥಗಳ ಮಹತ್ವ ಪಡೆದಿದೆ.ಮುನಿಪುರದ ತೋಟಿಗರು ವರ್ಷಂಪ್ರತಿ ಕಡಂಗೆಯಂ ಸ್ಥಿರತರತಾರೆಂಗೆ ರಂಬಭೋಗಕ್ಕೆ ಬಿಟ್ಟರೆ, ಉಗುರ ಮುನ್ನೋರ್ವರ. ಐನೂರ ನಾಲ್ವರು ಚಟ್ಟುರಾಸಿಗೆರೆದಲ್ಲಿ ಹಸಿಗೆ ಹಣವೊಂದನ್ನು ಕೊಟ್ಟುದುದಲ್ಲದೆ ಕುಳಿಯಯಿನೂರಕ್ಕೆ ಸಿದ್ದಾಯ,ಹರಕೆ ಕುಳಿಯ ಸುಂಕಲಾಭವು ಕಟ್ಟರೆ ಬಟ್ಟೆ ಸುಂಕವನ್ನು ಸರ್ವಬಾಧಾ ಪರಿಹಾರವಾಗಿ ಕೊಟ್ಟಿರುವನು, ಎಲೆಯ ಹೇರಿಗೆ ಒಂದು ವೀಸ ಸ್ಥಳದಲ್ಲಿ ಸಿಂಗವಟ್ಟಿಗೆ, ಸೋಮವಾರ ಗಾಣಕ್ಕೆ ಎರಡು ಸೂಳಸಗೆ ಎಣ್ಣೆ,ದೇವರಿಗಾಗಿಯೇ ಒಂದು ಗಾಣ.ಅರುವತ್ತೊಕ್ಕಲು ತಾರನಕಂಡೆಗೆ ಎಲೆ ಕೊಯಲಾಳಿ ಕೊಯ್ದುಕೊಡುವವರು, ಎಲೆಯ ಭೋಜಂಗರು ಅಧಿಕಾರಿಗಳು ಸುಂಕವನ್ನು ಬಿಟ್ಟಿರುವರು. ತಂಬಲಿಗರು ಹುಟ್ಟಿದ ಧಾರಣೆಯನ್ನು ಲೆಕ್ಕಮಾಡಿ ಕೊಡುವರು. ಹೂದೋಟ, ಹೂದೋಂಟದ ಎಲೆಬಳ್ಳಿಯಲ್ಲಿ ಐನೂರನ್ನು ದೇವರ ಪೂಜಾ ಕಾರ್ಯಕ್ಕೆ ಕೊಟ್ಟಿರುವರು.

ಇವರೆಲ್ಲ ಸೇರಿ ಪಂಚಲಿಂಗನ ಸಾನಿಧ್ಯದಲ್ಲಿಯ ಶ್ರೀ ಮಾಧವ ನಾರಾಯಣದೇವರ ಪ್ರತಿಷ್ಟೆ ಮಾಡಿ ದೇವರ ಅಂಗರಂಗ ಭೋಗಕ್ಕೆ ಸರ್ವಮನಸ್ಸವಾಗಿ ಸತ್ತಿಯಕೆರೆಯನ್ನು ಧಾರಾಪೂರ್ವಕ ಬಿಟ್ಟುಕೊಟ್ಟಿರುವರು ಆದರೆ ಇದು ಈಗ ಕಂಡುಬರುವುದಿಲ್ಲ. ಬ್ರಹ್ಮಪುರಿಯ ಬ್ರಾಹ್ಮಣರಿಗೆ ಕಡಕೋಳದಲ್ಲಿ ಎರಡು, ಬಳ್ಳಿಗೆರೆಯಲ್ಲಿ ಎರಡು,ಹುಲುಕುಂದದಲ್ಲಿ ಎರಡು, ಕುರುಳನೂರಿನಲ್ಲಿ ಎರಡು,ಬನ್ನಿವೂರಲ್ಲಿ ಎರಡು,ದಾಡೆಯಭೂಮಿಯಲ್ಲಿ ಎರಡು,ಗೊರವನೂರಲ್ಲಿ(ಗೊರವನಕೊಳ್ಳ) ಎರಡು, ಜಂಗವಾಡನೂರಲ್ಲಿ ಎರಡು ವೃತ್ತಿ ಕೊಟ್ಟಿರುವ ಬಗ್ಗೆ ಉಲ್ಲೇಖಿಸಿರುವರು.

ಅಂದರೆ ದೇವರ ನಿತ್ಯ ಪೂಜಾ ಕಾರ್ಯಕ್ಕೆ ಎಲ್ಲರೂ ತಮಗೆ ಒಪ್ಪಿಸಿದ ಜಮೀನಿನಿಂದ ಬರುವ ಆದಾಯದಲ್ಲಿ ಎಣ್ಣೆ,ಹೂವು,ಪತ್ರೆ,ಎಲೆ,ಇತ್ಯಾದಿ ನೀಡಲೆಂದು ಜಮೀನು ಉಂಬಳಿಯಾಗಿ ಕೊಡುವ ಮೂಲಕ ದೇವಾಲಯದ ನಿತ್ಯ ಪೂಜಾ ಕಾರ್ಯಗಳು ಸಾಂಗವಾಗಿ ನೆರವೇರಿಸಲು ದತ್ತಿ ನೀಡಿದ್ದು ಈ ಶಾಸನದಿಂದ ತಿಳಿದು ಬರುವ ಸಂಗತಿ. ಈ ಪರಿಸರದ ದಾನಶಾಸನದ ಪ್ರತಿ ಮಾಡಿದ ವ್ಯಕ್ತಿಯು ಸಾಮಾನ್ಯನಲ್ಲ "ಶ್ರೀಮತು ಪರಮಾಹೇಶ್ವರನ ದಂಣನಾಯ್ಕ,ಬಸವೀದೇವನ ಮುದ್ದು ಶ್ರೀ ಕಲಿದೇವರ ದಾಸ ಬೊಂಮ್ಮರಸನು" ಬರೆದಿರುವನೆಂದು ಇದನ್ನು ನಾಗೋಜನೆಂಬವ ಕಲ್ಲಿನಲ್ಲಿ ಅಚ್ಚಳಿಯದೇ ಬರೆದಿರುವನೆಂದು ತಿಳಿದು ಬರುತ್ತದೆ.

**2.2 ಮುನವಳ್ಳಿ ಕೋಟೆ**

ನಮ್ಮ ಬದುಕಿನ ಭೌಗೋಲಿಕ ಪರಿಸರವು ಮಾನವನ ನಾಗರಿಕತೆಯ ಮತ್ತು ಸಂಸ್ಕೃತಿಯ ಮೇಲೆ ಗಾಢವಾದ ಪ್ರಭಾವ ಬೀರುತ್ತದೆ. ಸಾಮ್ರಾಜ್ಯ ಕಟ್ಟುವ ಗುರುತರ ಜವಾಬ್ದಾರಿ ವಹಿಸಿದ ಕನ್ನಡಿಗ ಅರಸರೆಲ್ಲ ಅನೇಕ ಕೋಟೆಗಳ ನಿರ್ಮಾಣದಲ್ಲೂ ತಮ್ಮದೇ ಕಲಾಕೌಶಲ್ಯವನ್ನು ಹೊಂದಿದ್ದಾರೆ ಒಂದು ಕೋಟೆಯೆಂದರೆ ತಮ್ಮ ಆಳ್ವಿಕೆಯ ಅವಧಿ ಬೇರಾರಿಗೂ ಅಷ್ಟು ಸುಲಭವಾಗಿ ಒಳನುಸುಳಲು ಅವಕಾಶ ನೀಡದಂತೆ ಎಲ್ಲ ಸೌಕರ್ಯಗಳನ್ನು ಒಳಗೊಂಡಂತೆ ನಿರ್ಮಾಣಗೊಂಡ ವ್ಯವಸ್ಥಿತ ಕೋಟೆಗಳು ಕರ್ನಾಟಕದಲ್ಲಿವೆ.

ಮುನವಳ್ಳಿಯ ಕೋಟೆ ಕೂಡ ಹಾಳಾಗಿದ್ದರೂ ಕೂಡ ತನ್ನದೇ ಆದ ಐತಿಹ್ಯದೊಂದಿಗೆ ಭಗ್ನಾವಶೇಷಗಳಿಂದ ಚರಿತೆ ಹೇಳುವಂತಿದೆ.ಈ ಕೋಟೆ ಸಿಂಧೆ ಮಹಾರಾಜನ ಕಾಲಕ್ಕೆ ಕಟ್ಟಲ್ಪಟ್ಟಿತೆಂದು ಇಪ್ಪತ್ತೆರಡು ಎಕರೆಯಷ್ಟು ವಿಸ್ತಾರವಾಗಿರುವ ಈ ಕೋಟೆಯಲ್ಲಿ ದೇವಗಿರಿ ಯಾದವ ಕಾಲದ ಶಾಸನ ಉಡಚವ್ವ ದೇವಾಲಯ ಹಾಗೂ ಮಾರುತಿ ದೇವಾಲಯಗಳಿದ್ದು ಅರಮನೆಯ ಅವಶೇಷಗಳೆಲ್ಲ ಹಾಳಾಗಿವೆ.

ನದಿ ದಡದ ಸುತ್ತಲೂ ಎಲ್ಲೆಡೆ ಕೋಟೆಯ ಅವಶೇಷಗಳು ಕಾಣುತ್ತವೆ. ಮುನವಳ್ಳಿ ಗ್ರಾಮ ಈ ಕೋಟೆಯ ಮೂಲಕ ಎಲ್ಲ ಕಡೆಗೆ ಅಗಸಿ ಬಾಗಿಲು ಹೊಂದಿದ್ದು ಸೂಲಕಟ್ಟಿ ಅಗಸಿ ಹಾಗೂ ಹಿರೇ ಅಗಸಿ(ಮುಖ್ಯ ದ್ವಾರ) ತೊರಗಲ್ ಅಗಸಿಗಳಿದ್ದು ಮುಖ್ಯದ್ವಾರ ಅಗಸಿ ಬಾಗಿಲನ್ನು

ತಗೆದು ಆಧುನಿಕ ಕಟ್ಟಡ ವಿನ್ಯಾಸದಲ್ಲಿ ಇತ್ತೀಚಿಗೆ ನಿರ್ಮಿಸಲಾಗಿದ್ದು ಯಾವುದೇ ದಿಕ್ಕಿನಿಂದ ಪಯಣಿಸಿದರೂ ಬುರುಜುಗಳು ಹೊಂದಿದ್ದ ಕೋಟೆಯ ಅವಶೇಷಗಳು ಕಾಣುತ್ತವೆ.ಇದು ಎರಡು ಸುತ್ತಿನ ಕೋಟೆ.ಕೋಟೆಯ ದಕ್ಷಿಣಕ್ಕೆ ಹರಿಯುವ ಮಲಪ್ರಭಾ ನದಿ ಹರಿದು ವೈರಿಗಳ ಆಕ್ರಮಣ ತಡೆಗಟ್ಟಿ ನೈಸರ್ಗಿಕ ರಕ್ಷಣೆ ನೀಡಿದೆ. ಸುಮಾರು 500 ಅಡಿ ಕೋಟೆಯ ಗೋಡೆ ಚಾಚಿಕೊಂಡಿದ್ದು.ಮುಖ್ಯ ರಹದಾರಿ ಪೂರ್ವದ ಅಂಚಿನಲ್ಲಿ "ವಾಡೆ" ಅರಮನೆ ಭಗ್ನಾವಸ್ಥೆ ಹೊಂದಿದ್ದು ಅಚ್ಚುಕಟ್ಟಾದ ಕೆಂಪುಕಲ್ಲು,ನಚ್ಚು ಗಾರೆಗಳಿಂದ ಸುವ್ಯವಸ್ಥಿತವಾಗಿ ಕಟ್ಟಲಾದ ಗೋಡೆ.ಅಲ್ಲಲ್ಲಿ ಜೋಡಿಸಿರುವ ಬುರುಜುಗಳು (15–20 ಅಡಿ ಎತ್ತರ, ಕೆಳಭಾಗದಲ್ಲಿ 10 ಅಡಿ ಅಗಲ) ಮಲಪ್ರಭಾ ನದಿಯಿಂದ ಒಳಸೇರುವ ನೀರಿನ ಕಂದಕವು ಪೂರ್ವ ದಕ್ಷಿಣ ಮತ್ತು ಉತ್ತರ ದಿಶೆಗಳಲ್ಲಿ ಅಳವಡಿಸಲ್ಪಟ್ಟಿದ್ದು ಕೋಟೆಗೆ ರಕ್ಷಣೆ ನೀಡಿದೆ. ಒಂದು ಕಡೆ ನೀರು ಮೂರು ಕಡೆ ನೆಲ ಇದ್ದು ಇದೊಂದು ಮಹತ್ವದ ಕೋಟೆಯಾಗಿದೆ.[3]

ಕೋಟೆಯೊಳಗೆ ಪ್ರವೇಶಿಸಲು ಕೂಡ ಮಹಾದ್ವಾರವಿದ್ದು ಕೋಟೆಯಲ್ಲಿ ಪುರಾತನ ಬಾವಿಯಿದೆ. ಶಿಲಾಶಾಸನದಲ್ಲಿ ಶಕೆ 1174 ಜೇಷ್ಟ ತಿಥಿಯಂದು ಲಾಕುಲ ಶೈವ ಪದ್ಧತಿಯ ಉಡಚವ್ವ ದೇವಾಲಯ ನಿರ್ಮಾಣವಾಗಿತ್ತಂದು. ಈ ಕೋಟೆಯಲ್ಲಿ ಸುಂದರ ಹೂ ತೋಟವನ್ನು ನಿರ್ಮಿಸುವ ಮೂಲಕ ರಾಜರ ವಿಶ್ರಾಂತಿ ತಾಣವಾಗಿ ಇದನ್ನು ಬಳಸಲಾಗುತ್ತಿತ್ತು ಎಂಬ ವಿವರಗಳಿವೆ.

.ಮರಾಠರ ರಾಜರು ಕೂಡ ಎಲ್ಲಮ್ಮ ದೇವಾಲಯಕ್ಕೆ ಭೇಟಿ ನೀಡಿ ಮರಳುವಾಗ ಈ ಕೋಟೆಯಲ್ಲಿ ವಿಶ್ರಾಂತಿ ಪಡೆಯುವ ಮೂಲಕ ಈ ಕೋಟೆಯ ಬಳಕೆಯಾಗುತ್ತಿತ್ತು. ಅಷ್ಟೇ ಅಲ್ಲ ಈ ಕೋಟೆಯ ಮೂಲಕ ದಸರಾ ಸಂದರ್ಭದಲ್ಲಿ ಆನೆಯ ಅಂಬಾರಿಯ ಮೂಲಕ ಊರ ಹೊರಗಿರುವ ಕಾಳಿಕಾ ದೇವಾಲಯಕ್ಕೆ ತೆರಳಿ ಬನ್ನಿ ಪೂಜೆ ಹಾಗೂ ಬನ್ನಿ ಮುಡಿಯುವ ಕಾರ್ಯಕ್ರಮ ಜರುಗುತ್ತಿದ್ದು ಇಂದಿಗೂ ಸಹ ಇಲ್ಲಿಂದ ಪಲ್ಲಕ್ಕಿ ಉತ್ಸವ ಸಾಗುವ ಮೂಲಕ ಬನ್ನಿ ಮುಡಿಯುವ ಸಂಪ್ರದಾಯ ಉಳಿದುಕೊಂಡು ಬಂದಿದೆ.

ಮರಾಠರ ಕಾಲಕ್ಕೆ ಇದು ಆದಿಲ್ ಶಹರ ವಿರುದ್ಧ ಸೈನಿಕ ಕಾರ್ಯಾಚರಣೆಗೆ ಸ್ಥಾನಿಕ ಕೇಂದ್ರವಾಗಿತ್ತು.ಕೊಲ್ಲಾಪುರದ ಸಿಂಧೆ–ಪಟವರ್ಧನ ಮನೆತನದ "ಜೀವಜಿರಾವ್" ಸಿಂಧೆ ಇದನ್ನು ಪಡೆದುಕೊಂಡನು. 2ನೇ ಬಾಜಿರಾವ್ ನಿಪ್ಪಾಣಿಯ ನಿಂಬಾಳ್ಕರ ದೇಸಾಯಿಗೆ ಮುನವಳ್ಳಿ ಎಕ್ಕೇರಿ ಇತ್ಯಾದಿ 6 ಲಕ್ಷ ಎಕರೆ ಪ್ರದೇಶ ನೀಡಿದನು. ಕ್ರಿ.ಶ.1839 ರಲ್ಲಿ ಬ್ರಿಟಿಷರ ಸಹಕಾರದಿಂದ ವಿಶಾಲ ನಿಪ್ಪಾಣಿ ಸಂಸ್ಥಾನಕ್ಕೆ ನಿಂಬಾಳಕರನು ಅಧಿಪತಿಯಾಗಿ ಪಟ್ಟವೇರಿದನು. ಕ್ರಿ.ಶ. 1830 ರ ಕೊಲ್ಲಾಪುರದ ದೊರೆಯಿಂದ,ಬ್ರಿಟಿಷರು ಒಪ್ಪಂದದ ಮೂಲ ಮುನವಳ್ಳಿಯನ್ನು ಬ್ರಿಟಿಷ್ ಪ್ರದೇಶದಲ್ಲಿ ವಿಲೀನಗೊಳಿಸಲಾಯಿತು. ಇಂದಿಗೂ ಇಲ್ಲಿನ ಆಂಜನೇಯ ದೇವಾಲಯ, ಉಡಚವ್ವ

3. ಡಾ. ಎಸ್. ಕೆ. ಜೋಶಿ, "ಬೆಳಗಾವಿ ಜಿಲ್ಲೆಯ ಕೋಟೆಕೊತ್ತಲಗಳು", ಪುಟ – 435

ದೇವಾಲಯದಲ್ಲಿ ಪೂಜೆ-ಪುನಸ್ಕಾರಗಳು ಜರುಗುತ್ತಿದ್ದು ಒಂದು ಕಾಲಕ್ಕೆ ಕೋಟೆಯೊಳಗೆ ನಾಟಕ.ಚಲನಚಿತ್ರ(ಟೆಂಟ್)ಪ್ರದರ್ಶನಗಳು ಜರುಗುತ್ತಿದ್ದವು ಎಂದು ಇಲ್ಲಿನ ಹಿರಿಯರು ಹೇಳುವರು.[4]

## 2.3 ಚರಿತ್ರೆಯ ಪುಟಗಳಲ್ಲಿ ಮುನವಳ್ಳಿ

ಮುನವಳ್ಳಿಯನ್ನು ಮೊದಲು ಕಾಣುವುದು ಚರಿತ್ರೆಯ ಪುಟಗಳಲ್ಲಿ ಇಲ್ಲಿ ದೊರೆತ ಶಾಸನದ ಮೂಲಕ ದೇವಗಿರಿ ಯಾದವರ ಕಾಲದಲ್ಲಿ ಜೀರ್ಣೋದ್ದಾರಗೊಂಡ ಪಂಚಲಿಂಗೇಶ್ವರ ದೇವಾಲಯವು 8 ವಿಭಿನ್ನ ದೇವಾಲಯಗಳನ್ನೊಳಗೊಂಡ ಸಮುಚ್ಚಯವುಳ್ಳ ದೇಗುಲ.ಇಲ್ಲಿನ ಶಾಸನದಲ್ಲಿ ಇದನ್ನು ಮುನಿಪುರ ಎಂದು ಕರೆಯಲಾಗಿದೆ. ಇದಲ್ಲದೇ ಕೈವಲ್ಯಾಶ್ರಮ ಸ್ವಾಮಿ ಮಠ,ಆಲೂರ ಮಠ,ಸೋಮಶೇಖರ ಮಠ,.ವಿಠೋಭಾ ಮಂದಿರ,ವೆಂಕಟೇಶ್ವರ ದೇವಾಲಯ,ತೊರಗಲ್ ನಾಡಿನ ಕಾಲದ ದೇವಗಿರಿ ಯಾದವರ ಕೋಟೆ ಇವು ಇಲ್ಲಿನ ಪ್ರಮುಖ ಆಕರ್ಷಣೀಯ ತಾಣಗಳು.ಬಿ,ಎ,ಬಿ.ಕಾಂ, ಬಿಈಡಿ ಪದವಿ ವರೆಗೆ ಕಾಲೇಜು ಶಿಕ್ಷಣ ವ್ಯವಸ್ಥೆ ಹೊಂದಿರುವ ಜೊತೆಗೆ ಐ.ಟಿ.ಐ ಕಾಲೇಜು ಒಳಗೊಂಡ ಶೈಕ್ಷಣಿಕ ತಾಣ.

ಮುನವಳ್ಳಿ ಎಂಬ ಹೆಸರು ಬರಲು ಕಾರಣ.ಪುರಾಣ ಕಾಲದಲ್ಲಿ ಇಲ್ಲಿನ ಮಲಪ್ರಭಾ ನದಿ ದಡದಲ್ಲಿ ವಶಿಷ್ಟ.ವಿಭಾಂಡು,ಅತ್ರಿ,ಪರಶುರಾಮ,ಜಮದಗ್ನಿ ಮೊದಲಾದ ಋಷಿ ಮುನಿಗಳು ತಪಸ್ಸನ್ನು ಆಚರಿಸುತ್ತಿದ್ದರಂತೆ, ಪಂಚಲಿಂಗೇಶ್ವರ ದೇವಾಲಯ ಸ್ಥಾಪನೆಯ ಹಿಂದೆಯು ಕೂಡ ಇಂಥ ದೃಷ್ಠಾಂತವೊಂದಿದೆ. ಹೀಗಾಗಿ ಇದನ್ನು ಮುನಿಂದ್ರವಳ್ಳಿ,ಮುನಿಗಳ ಹಳ್ಳಿ,ಮುನಿಪಳ್ಳಿ ಎಂದು ಕರೆಯತ್ತಾ ಬಂದಿದ್ದು ಕಾಲಕ್ರಮೇಣ ಅದು ಮುನವಳ್ಳಿ ಎಂದಾಗಿದೆ,

ಬ್ರಿಟಿಷರು ಇದನ್ನು ಮನೋಳಿ ಎಂದು ಕರೆದಿದ್ದು.ಇಲ್ಲಿ ಲಬ್ಯವಾದ 1145 ಹಾಗೂ 1174 ರ ಶಾಸನಗಳ ಪ್ರಕಾರ ಮುನವಳ್ಳಿಯನ್ನು ತೊರಗಲ್ ನಾಡಿನ ಒಂದು ಭಾಗವೆಂದು ಹೇಳಲಾಗಿದೆ,.ಪಂಚಲಿಂಗೇಶ್ವರ ದೇವಾಲಯವು ದೇವಗಿರಿ ಯಾದವರ ಕಾಲದಲ್ಲಿ ಸಿಂಘಣದೇವ ಎಂಬ ಅರಸ ತನ್ನ ದಂಡನಾಯಕ ಜೋಗದೇವನಿಗೆ ಮುನಿಪುರವನ್ನು ಆಡಳಿತಕ್ಕೆ ಒಳಪಡಿಸುವ ಮೂಲಕ ಪಂಚಲಿಂಗೇಶ್ವರ ದೇವಾಲಯದ ಜೀರ್ಣೋದ್ದಾರಗೈದ ಬಗ್ಗೆ ವಿವರಣೆಗಳಿವೆ.

ಪಂಚಲಿಂಗೇಶ್ವರ ದೇವಾಲಯದಲ್ಲಿ ಎರಡು ಭಾವಿಗಳು ಬನಶಂಕರಿ ದೇವಿ.ಶ್ರೀ ರೇಣುಕಾದೇವಿ ದೇವಾಲಯ,ತ್ರ್ಯಂಭಕೇಶ್ವರ(ಜೋತಿರ್ಲಿಂಗ ಸ್ವರೂಪ) ದೇವಾಲಯ, ಅಗ್ನಿ ದೇವಾಲಯ, ರುದ್ರಮುನೀಶ್ವರ ದೇವಾಲಯ. ಮುಂತಾದ ದೇವಾಲಯಗಳನ್ನು ಎರಡು ಕಲ್ಯಾಣ ಮಂಟಪಗಳನ್ನು ಒಳಗೊಂಡಿದ್ದು ಸದಾ ಕಾಲವೂ ಭಕ್ತಸಮೂಹದಿಂದ ಕೂಡಿದ್ದು ಪ್ರತಿ ವರ್ಷ ಶಿವರಾತ್ರಿ ಅಮವಾಸೆಯಂದು ರಥೋತ್ಸವ,ಕಾರ್ತಿಕ ಮಾಸದಲ್ಲಿ ಕಾರ್ತಿಕೋತ್ಸವ ಜರುಗುತ್ತದೆ. ಇಲ್ಲಿನ ಮಲಪ್ರಭಾ ನದಿಯಲ್ಲಿ ಮಕರಸಂಕ್ರಮಣದಂದು ತೆಪ್ಪೋತ್ಸವ ಜರುಗುತ್ತದೆ.

ಇಲ್ಲಿನ ಕೋಟೆಯಲ್ಲಿರುವ ಉಡಚವ್ವನ ದೇವಾಲಯ ಶಾಸನದಲ್ಲಿ ತೊರಗಲ್ ನಾಡಿನ ಒಂದು ಭಾಗ ಎಂದೂ ಇಲ್ಲಿ ಆಗಿನ ರಾಜರು ವಿಶ್ರಾಂತಿಗೋಸ್ಕರ ಹೂದೋಟ ನಿರ್ಮಿಸಿದ್ದರೆಂಬ

---

4. ಎಸ್. ಬಿ. ದೇಶನೂರ, "ತಲ್ಲೂರ ದೇಸಗತಿ" (ಬೆಳಗಾವಿ ಜಿಲ್ಲೆಯ ಇತಿಹಾಸ ಮತ್ತು ಪುರಾತತ್ವ) ಪುಟ – 483

ಅಂಶವಿದೆ ಈ ಕೋಟೆಯ ಒಳಗೆ ಆಂಜನೇಯ ದೇವಾಲಯ, ಪುರಾತನ ಬಾವಿ ಉಡಚವ್ವ ದೇಗುಲಗಳು ಗಮನ ಸೆಳೆಯುತ್ತವೆ.

ಇಂದಿಗೂ ಇಲ್ಲಿನ ಆಲೂರು ಮಠ ಹಾಗೂ ಸೋಮಶೇಖರ ಮಠ,ಕೈವಲ್ಯಾಶ್ರಮ ಮಠ,ವಿಠೋಭಾ ಮಂದಿರ,ವೆಂಕಟೇಶ್ವರ ದೇವಾಲಯ,ತಮ್ಮದೇ ಆದ ಧಾರ್ಮಿಕ ಚಟುವಟಿಕೆಗಳ ಮೂಲಕ ಪ್ರಸಿದ್ದಿ ಹೊಂದಿದ್ದು ಇಲ್ಲಿ ಇನ್ನೂ ಹಲವಾರು ವೈಶಿಷ್ಟ್ಯಗಳಿವೆ. ಅಕ್ಕಮಹಾದೇವಿ ಮಠ, ಹಿರೇಮಠ, ಅಷ್ಟಗಿಮಠ, ವಿರಕ್ತಮಠ, ಸಂಭಾಳಮಠ, ಪಶುಪತಿ ಮಠ, ಚಂದ್ರಶೇಖರ ಮಠ.ವಿರಕ್ತಮಠ. ಸಾಲಿಮಠ ಮೊದಲಾದ ಮನೆತನಗಳು ಮಠಗಳು ಗಮನ ಸೆಳೆಯುತ್ತವೆ. ಇಲ್ಲಿಗೆ 5 ಕಿ.ಮೀ. ಅಂತರದಲ್ಲಿರುವ ನವಿಲುತೀರ್ಥ ಆಣೆಕಟ್ಟು, 4 ಕಿ.ಮಿ ಅಂತರದಲ್ಲಿರುವ ವರವಿಕೊಳ್ಳ ಜಲಪಾತ ಪ್ರಸಿದ್ದ ಪ್ರವಾಸಿ ತಾಣಗಳಾಗಿವೆ.

ಮುನವಳ್ಳಿಗೆ ಸಾಕಷ್ಟು ಸಾರಿಗೆ ವ್ಯವಸ್ಥೆ ಇದ್ದು ಸಕ್ಕರೆ ಕಾರ್ಖಾನೆ ಮೂಲಕವಂತೂ ಇತ್ತೀಚಿನ ವರ್ಷಗಳಲ್ಲಿ ದೇಶದಾದ್ಯಂತ ಹೆಸರುವಾಸಿಯಾಗಿದೆ

**2.4 "ತೀರ್ಥ ಪ್ರಬಂಧಃ" ಕೃತಿಯಲ್ಲಿ ಮಲಪ್ರಭಾ ನದಿಯ ಕುರಿತ ವರ್ಣನೆ**

ಡಾಃ ವ್ಯಾಸನಕೆರೆ ಪ್ರಭಂಜನಾಚಾರ್ಯರು ಅನುವಾದಿಸಿದ ಶ್ರೀ ವಾದಿರಾಜತೀರ್ಥ ಶ್ರೀಪಾದ ವಿರಚಿತಃ "ತೀರ್ಥಪ್ರಬಂಧಃ"(1991)ಕೃತಿಯಲ್ಲಿನ ಮುನ್ನುಡಿಯಲ್ಲಿನ ಪುಟ 25 ಮತ್ತು ಪುಟ 269 ಮತ್ತು 270 ರಲ್ಲಿನ ಸ್ತೋತ್ರಗಳಲ್ಲಿ ಮಲಪ್ರಭಾ ನದಿ ಕುರಿತು ಪವಿತ್ರವಾದ ನದಿ ಎಂಬುದಕ್ಕೆ ಈ ರೀತಿ ಉಲ್ಲೇಖಿಸಲಾಗಿದೆ.

ಕಾವೇರಿ ಸಿಂಧು ಮಾಲಿನೀ ಗಾರ್ಗಿಣೀ ಹರಿ
ದ್ರಾವತೀ ಇಂದ್ರಾಣಿ ಕುಂದ ಕುಂದಿನಿ ಶೈವ
ದೇವತೆ(ವ)ತಿ ಪಾತಾಳಗಂಗಾ ಪುನಃ ಪುನಃ ನೀರಾ ಕುಮಾರಧಾರೀ
ಧಾವಿತ್ರಿ ಧ್ಯಾನಮಾಲಾ ಪುಷ್ಪವತಿ ಲೋಕ
ಪಾವನೀ ಮೌಳೀಮೌಕ್ತೀ ಸಿಂಧು ಧರ್ಮಾಕು
ಶಾವರ್ತಿನೀ ಚಕ್ರತೀರ್ಥ ಭಯನಾಶಿನೀ ವರದಾ ಮಲಾಪಹಾರೀ

ಹಾಗೂ

ಅನಂತಂ ತಾಮ್ರಪರ್ಣ್ಯಾಂ ತು ಮಲಹಾರ್ಯಾಂ ಜನಾರ್ದನಮ್
ಪಿನಾಕಿನ್ಯಾಂ ಮಹಾಭಾಗ ಕೇಶವಂ ಕೇಶನಾಶನಮ್[5]

ಈ ರೀತಿ ಮಲಾಪಹಾರೀ ನದಿಯ ಪ್ರಾಮುಖ್ಯತೆಯನ್ನು ತಿಳಿಸುವ ಶ್ಲೋಕಗಳು "ತೀರ್ಥಪ್ರಬಂಧಃ" ಕೃತಿಯಲ್ಲಿ ಮೂಡಿಬಂದಿದ್ದು. ಯಾವುದೇ ತೀರ್ಥಯಾತ್ರೆಗೆ ಹೊರಡುವವರು ಮೊದಲು ಆಯಾ ತೀರ್ಥಕ್ಷೇತ್ರಗಳ ಮಹತ್ವವನ್ನು, ಅವುಗಳ ಪೌರಾಣಿಕ ಹಿನ್ನಲೆ ಸ್ನಾನಾದಿಗಳಿಗೆ

5. ಡಾ. ವ್ಯಾಸನಕೆರೆ ಪ್ರಭಂಜನಾಚಾರ್ಯ, "ತೀರ್ಥ ಪ್ರಬಂಧಃ" ಪುಟ–25, 269–270

ವಿಹಿತಮಂತ್ರಸ್ತೋತ್ರಗಳು,ಅವುಗಳ ಅನುಷ್ಠಾನ ಕ್ರಮಗಳನ್ನು ತಿಳಿದುಕೊಂಡಿರಬೇಕು ಎಂಬುದನ್ನು ದೇಶದ ವಿವಿಧ ನದಿಗಳ ವರ್ಣನೆಯ ಜೊತೆಗೆ ಅವುಗಳ ಮಹತ್ವವನ್ನು ತಿಳಿಸುವ ಈ ಕೃತಿಯಲ್ಲಿ ಮಲಾಪಹಾರಿ ನದಿಯಲ್ಲಿ ಸ್ನಾನಾದೀ ಮಾಡುವಾಗ ಜನಾರ್ಧನ ಭಗವದ್ರೂಪವನ್ನು ಸ್ಮರಿಸಬೇಕು ಎಂದು ತಿಳಿಸಿರುವರು.

ಗೀತಾ ಮಹಾತ್ಮೆಯ ಕಥೆಗಳು ( ಶ್ರೀ ಭಗವದ್ಗೀತೆ ಪಾರಾಯಣ ಸಹಿತ) 2010 ರಲ್ಲಿ ಗೀತಾ ಪ್ರೆಸ್, ಗೋರಖಪುರ ಇವರು ಮುದ್ರಿಸಿರುವ ಪುಸ್ತಕದ ಪುಟ ಸಂಖ್ಯೆ 107 ರಿಂದ 110 ರ ವರೆಗೆ ಮುದ್ರಿತ 13 ನೆ ಅಧ್ಯಾಯದಲ್ಲಿ ಮಲಾಪಹಾರಿ ನದಿ ದಡ ಅಲ್ಲಿ ವಾಸವಿದ್ದ ಋಷಿ ಕುರಿತು ದೃಷ್ಟಾಂತ ಈ ಕೆಳಗಿನಂತೆ ಮುದ್ರಿತವಾಗಿದೆ.

### 2.5 ಶ್ರೀ ಮದ್ಭಗವದ್ಗೀತೆಯ ಹದಿಮೂರನೇ ಅಧ್ಯಾಯದ ಮಾಹಾತ್ಮೆಯಲ್ಲಿ ಮುನವಳ್ಳಿ

ಮಹಾದೇವ ಹೇಳುತ್ತಾನೆ- ಪಾರ್ವತಿ! ಈಗ ಹದಿಮೂರನೇ ಅಧ್ಯಾಯದ ಅಗಾಧ ಮಹಿಮೆಯ ವರ್ಣನೆಯನ್ನು ಕೇಳು. ಅದನ್ನು ಕೇಳುವುದರಿಂದ ನೀನು ಬಹಳ ಸಂತೋಷ ಪಡುವೆ. ದಕ್ಷಿಣ ದಿಕ್ಕಿನಲ್ಲಿ ತುಂಗಭದ್ರಾ ಎಂಬ ಒಂದು ಬಹಳ ದೊಡ್ಡ ನದಿಯಿದೆ. ಅದರ ದಡದಲ್ಲಿ ಹರಿಹರಪುರ ಎಂಬ ರಮಣೀಯ ನಗರ ನೆಲೆಸಿದೆ.. ಅಲ್ಲಿ ಹರಿಹರನೆಂಬ ಹೆಸರಿನಿಂದ ಸಾಕ್ಷಾತ್ ಭಗವಾನ್ ಶಿವನು ವಿರಾಜಮಾನನಾಗಿದ್ದಾನೆ. ಅವನ ದರ್ಶನ ಮಾತ್ರದಿಂದಲೇ ಪರಮ ಕಲ್ಯಾಣ ಪ್ರಾಪ್ತಿಯಾಗುತ್ತದೆ. ಹರಿಹರಪುರದಲ್ಲಿ ಹರಿದೀಕ್ಷಿತರೆಂಬ ಒಬ್ಬ ಶ್ರೋತ್ರಿಯ ಬ್ರಾಹ್ಮಣರು ಇರುತ್ತಿದ್ದರು. ಅವರು ತಪಸ್ಸು ಮತ್ತು ಸ್ವಾಧ್ಯಾಯಗಳಲ್ಲಿ ತಲ್ಲೀನರೂ ಮತ್ತು ವೇದಗಳ ಪ್ರಕಾಂಡ ಪಂಡಿತರಾಗಿದ್ದರು. ಅವರಿಗೆ ಒಬ್ಬ ಪತ್ನಿಯಿದ್ದಳು. ಆಕೆಯನ್ನು ಜನ ದುರಾಚಾರಾ ಎಂದೇ ಕರೆಯುತ್ತಿದ್ದರು. ಈ ಹೆಸರಿಗೆ ತಕ್ಕಂತೆಯೇ ಅವಳ ಕಾರ್ಯವೂ ಸಹ ಹಾಗೇ ಇದ್ದಿತು. ಅವಳು ಸದಾ ಪತಿಯನ್ನು ಕೆಟ್ಟ ಮಾತುಗಳಿಂದ ಬೈಯುತ್ತಿದ್ದಳು. ಅವಳು ಎಂದೂ ಸಹ ಅವರ ಜೊತೆಯಲ್ಲಿ ಮಲಗಲಿಲ್ಲ. ಪತಿಯೊಡನೆ ಸಂಬಂಧವಿರುವ ಜನರು ಯಾರಾದರೂ ಮನೆಗೆ ಬಂದರೆ, ಅವರೆಲ್ಲರನ್ನು ಬೆದರಿಸುತ್ತಿದ್ದಳು ಮತ್ತು ತಾನು ಕಾಮೋನ್ಮತ್ತಳಾಗಿ ನಿರಂತರ ವ್ಯಭಿಚಾರಿಗಳೊಡನೆ ರಮಿಸುತ್ತಿದ್ದಳು.[6]

ಒಂದು ದಿನ ಈಕಡೆ-ಆಕಡೆ ಬರುವ- ಹೋಗುವ ಪುರವಾಸಿಗಳಿಂದ ನಗರವು ತುಂಬಿರುವುದನ್ನು ಕಂಡು ಅವಳು ನಿರ್ಜನ ಹಾಗೂ ದುರ್ಗಮವಾದ ಕಾಡಿನಲ್ಲಿ ತನಗಾಗಿ ಸಂಕೇತ ಸ್ಥಾನವೊಂದನ್ನು ಮಾಡಿಕೊಂಡಳು. ಒಂದು ಸಾರಿ ರಾತ್ರಿಯಲ್ಲಿ ಯಾವ ಕಾಮಿಯನ್ನೂ ಕಾಣದೆ ಅವಳು ಮನೆಯ ಬಾಗಿಲನ್ನು ತೆರೆದು ನಗರದಿಂದ ಹೊರಗೆ ಸಂಕೇತಸ್ಥಾನಕ್ಕೆ ಹೋದಳು. ಆ ಸಮಯದಲ್ಲಿ ಅವಳ ಮನಸ್ಸು ಕಾಮ-ವಾಸನೆಯಿಂದ ಮೋಹಗೊಂಡಿದ್ದಿತ್ತು.

---

6. ಗೀತಾ ಮಹಾತ್ಮೆಯ ಕಥೆಯಗಳು, ಸಂಪಾದಕೀಯ, ಗೀತಾ ಪ್ರೆಸ್. ಗೊರಖಪುರ, ಪುಟ 107, 110

ಅವಳು ಒಂದೊಂದು ಪೊದೆಯ ಬಳಿ ಹಾಗೂ ಪ್ರತಿಯೊಂದು ಮರದ ಕೆಳಗಡೆಗೂ ಹೋಗಿ–ಹೋಗಿ ಪ್ರಿಯತಮನನ್ನು ಹುಡುಕುವುದರಲ್ಲಿ ತೊಡಗಿದಳು. ಆದರೆ ಆ ಎಲ್ಲಾ ಸ್ಥಾನಗಳಲ್ಲಿಯೂ ಅವಳ ಪರಿಶ್ರಮ ವ್ಯರ್ಥವಾಯಿತು. ಅವಳಿಗೆ ಪ್ರಿಯತಮನ ದರ್ಶನವಾಗಲಿಲ್ಲ. ಆಗ ಅವಳು ಆ ಕಾಡಿನಲ್ಲಿ ನಾನಾ ಪ್ರಕಾರದ ಮಾತುಗಳನ್ನಾಡುತ್ತಾ ವಿಲಾಪ ಮಾಡಲು ತೊಡಗಿದಳು. ಎಲ್ಲಾ ಕಡೆಗಳಲ್ಲಿಯೂ ಸುತ್ತಾಡಿ ವಿಯೋಗಜನಿತ ವಿಲಾಪ ಮಾಡುತ್ತಾ ಇರುವ ಆ ಹೆಂಗಸಿನ ಶಬ್ದವನ್ನು ಕೇಳಿ ಯಾವುದೋ ಮಲಗಿದ್ದ ಹುಲಿ ಎಚ್ಚರಗೊಂಡು ನೆಗೆದು ಅವಳು ಅಳುತ್ತಿದ್ದ ಆ ಸ್ಥಳಕ್ಕೆ ಬಂದಿತು.

ಆ ಕಡೆ ಅವಳೂ ಸಹ  ಅದು ಬರುತ್ತಿರುವುದನ್ನು ನೋಡಿ ಯಾರೋ ಪ್ರೇಮಿಯಿರಬೇಕೆಂಬ ಸಂಶಯದಿಂದ ಅವನ ಮುಂದೆ ನಿಂತುಕೊಳ್ಳವುದಕ್ಕಾಗಿ ಮರೆಯಿಂದ ಹೊರಕ್ಕೆ ಬಂದಳು. ಆ ಸಮಯಕ್ಕೆ ಹುಲಿಯೂ ಬಂದು ಅವಳನ್ನು ನಖರೂಪೀ ಬಾಣಗಳ ಪ್ರಹಾರದಿಂದ ನೆಲಕ್ಕೆ ಉರುಳಿಸಿ ಬಿಟ್ಟಿತು. ಈ ಪರಿಸ್ಥಿತಿಲ್ಲಿಯೂ ಸಹ ಅವಳು ಕಠೋರ ವಾಣಿಯಲ್ಲಿ ಕಿರುಚುತ್ತಾ– "ಎಲೌ ಹುಲಿ! ಏತಕ್ಕಾಗಿ ನೀನು ನನ್ನನ್ನು ಕೊಲ್ಲಲು ಇಲ್ಲಿಗೆ ಬಂದಿರುವೆ? ಮೊದಲು ಈ ಎಲ್ಲಾ ಮಾತುಗಳನ್ನು ತಿಳಿಸು, ನಂತರ ನನ್ನನ್ನು ಕೊಲ್ಲು"– ಎಂದು ಕೇಳಿಯೇ ಬಿಟ್ಟಳು.

ಅವಳ ಈ ಮಾತನ್ನು ಕೇಳಿ ಪ್ರಚಂಡ ಪರಾಕ್ರಮಿ ಹುಲಿಯು ಅವಳನ್ನು ತನ್ನ ಆಹಾರವಾಗಿ ಮಾಡಿಕೊಳ್ಳುವುದನ್ನು ಕ್ಷಣಕಾಲಕ್ಕೆ ತಡೆದುಕೊಂಡಿತು ಮತ್ತು ನಗುತ್ತಿರುವಂತೆ ಹೀಗೆ ಹೇಳಿತು– "ದಕ್ಷಿಣ ದೇಶದಲ್ಲಿ "ಮಲಾಪಹಾರಿ" ಎಂಬ ಒಂದು ನದಿಯುಂಟು, ಅದರ ತೀರದಲ್ಲಿ "ಮುನಿಪರ್ಣಾ" ಎಂಬ ನಗರವಿದೆ. ಅಲ್ಲಿ ಪಂಚಲಿಂಗವೆಂಬ ಹೆಸರಿನಿಂದ ಪ್ರಸಿದ್ಧವಾದ ಸಾಕ್ಷಾತ್ ಭಗವಾನ್ ಶಂಕರನು ಇರುತ್ತಾನೆ. ಅದೇ ನಗರದಲ್ಲಿ ನಾನು ಬ್ರಾಹ್ಮಣಕುಮಾರನಾಗಿ ಇರುತ್ತಿದ್ದೆನು.

ನದಿಯ ದಡದಲ್ಲಿ ಒಬ್ಬನೇ ಕುಳಿತಿರುತ್ತಿದ್ದೆ ಮತ್ತು ಯಜ್ಞಕ್ಕೆ ಅಧಿಕಾರಿಯಲ್ಲವರಿಗೂ ಸಹ ಯಜ್ಞಮಾಡಿಸಿ ಅವರ ಅನ್ನವನ್ನು ತಿನ್ನುತ್ತಿದ್ದೆನು. ಇಷ್ಟೇ ಅಲ್ಲ, ಹಣದ ಲೋಭದಿಂದ ನಾನು ಸದಾ ನನ್ನ ವೇದಪಾಠದ ಫಲವನ್ನು ಸಹ ಮಾರಾಟ ಮಾಡುತ್ತಿದ್ದೆ. ಅನ್ಯ ಭಿಕ್ಷುಕರನ್ನು ಬೈದು ಓಡಿಸಿಬಿಡುತ್ತಿದ್ದೆ ಮತ್ತು ಇತರರಿಗೆ ಕೊಡಲು ಯೋಗ್ಯವಲ್ಲದ ಹಣವನ್ನೂ ಸಹ ಕೊಡದೇ ಸ್ವತಃ ನಾನೇ ಯಾವಾಗಲೂ ತೆಗೆದುಕೊಳ್ಳುತ್ತಿದ್ದೆ– ಈ ರೀತಿ ನನ್ನ ಲೋಭ ಅತಿಯಾಗಿ ಹೆಚ್ಚುತ್ತಾಹೋಗಿತ್ತು. ಸಾಲ ತೆಗೆದುಕೊಳ್ಳುವ ನೆಪದಲ್ಲಿ ನಾನು ಜನಗಳಿಗೆಲ್ಲಾ ಮೋಸ ಮಾಡುತ್ತಿದ್ದೆ.

ಅನಂತರ ಸ್ವಲ್ಪಕಾಲ ಕಳೆದ ಮೇಲೆ ನಾನು ಮುದುಕನಾದೆ. ನನ್ನ  ಕೂದಲು ಬೆಳ್ಳಗಾದವು, ಕಣ್ಣುಗಳು ಕಾಣಿಸುತ್ತಿರಲಿಲ್ಲ ಮತ್ತು ಹಲ್ಲುಗಳೆಲ್ಲಾ ಉದುರಿಹೋದವು. ಇಷ್ಟಾದರೂ ಸಹ ದಾನ ತೆಗೆದುಕೊಳ್ಳುವ ನನ್ನ ಅಭ್ಯಾಸ ಬಿಟ್ಟುಹೋಗಲಿಲ್ಲ. ಪರ್ವಗಳು ಬಂದರೆ ತೆಗೆದುಕೊಂಡು ತೀರ್ಥದ ಸಮೀಪಕ್ಕೆ ಹೋಗುತ್ತಿದ್ದೆ. ಅನಂತರ ನನ್ನ ಅಂಗಗಳೆಲ್ಲಾ ದುರ್ಬಲವಾಗಿ ಹೋದಾಗ ಒಂದು ಸಾರಿ ನಾನು ಕೆಲವು ಧೂರ್ತ ಬ್ರಾಹ್ಮಣರ ಮನೆಗೆ ಊಟ ಕೇಳಲು ಹೋದೆನು. ಅದೇ

ಸಮಯದಲ್ಲಿ ನಾಯಿಯೊಂದು ನನ್ನ ಕಾಲನ್ನು ಕಚ್ಚಿತು. ಆಗ ನಾನು ಮೂರ್ಛಿತನಾಗಿ ಕ್ಷಣಮಾತ್ರದಲ್ಲಿ ನೆಲಕ್ಕೆ ಬಿದ್ದೆನು. ನನ್ನ ಪ್ರಾಣ ಹೊರಟೇ ಹೋಯಿತು.

ಆದಾದ ನಂತರ ನಾನು ಈ ಹುಲಿಯಾಗಿ ಜನಿಸಿದೆ. ಅಂದಿನಿಂದ ಈ ದುರ್ಗಮ ವನದಲ್ಲಿರುತ್ತೇನೆ ಮತ್ತು ನನ್ನ ಪೂರ್ವ ಪಾಪಗಳನ್ನು ಜ್ಞಾಪಿಸಿಕೊಂಡು ಧರ್ಮಿಷ್ಠ ಮಹಾತ್ಮರು, ಯತಿಗಳು, ಸಾಧುಪುಷರು ಹಾಗೂ ಪತಿವ್ರತಾ ಸ್ತ್ರೀಯರನ್ನು ಎಂದಿಗೂ ನಾನು ತಿನ್ನುವುದಿಲ್ಲ. ಪಾಪಿ-ದುರಾಚಾರಿ ಹಾಗೂ ಕುಲಟೆಯರಾದ ಸ್ತ್ರೀಯರನ್ನೇ ನಾನು ನನ್ನ ಭಕ್ಷ್ಯವಾಗಿ ಮಾಡಿಕೊಳ್ಳುತ್ತೇನೆ: ಆದುದರಿಂದ ಕುಲಟೆಯಾದ ಕಾರಣ ನೀನು ಖಂಡಿತವಾಗಿಯೂ ನನ್ನ ಗ್ರಾಸವಾಗುವೆ".

ಈ ಪ್ರಕಾರ ಹೇಳಿ ಅದು ತನ್ನ ಕಠೋರವಾದ ಉಗುರುಗಳಿಂದ ಅವಳ ಶರೀರವನ್ನು ತುಂಡು-ತುಂಡುಮಾಡಿ ತಿಂದು ಹಾಕಿತು. ನಂತರ ಯಮರಾಜನ ದೂತರು ಆ ಪಾಪಿನಿಯನ್ನು ಯಮನೀಪುರಿಗೆ ಕರೆದೊಯ್ದರು. ಅಲ್ಲಿ ಯಮರಾಜನ ಆಜ್ಞೆಯಂತೆ ಅವರು ಅನೇಕಾನೇಕ ಬಾರಿ ಅವಳನ್ನು ಮಲಮೂತ್ರ ಮತ್ತು ರಕ್ತದಿಂದ ತುಂಬಿರುವ ಭಯಂಕರ ಕುಂಡಗಳಲ್ಲಿ ಹಾಕಿದರು. ಕೋಟ್ಯಾಂತರ ಕಲ್ಪಗಳವರೆಗೆ ಅದರಲ್ಲಿಟ್ಟ ನಂತರ ಅವಳನ್ನು ಅಲ್ಲಿಂದ ಕರೆದುಕೊಂಡು ಬಂದು ನೂರು ಮನ್ವಂತರಗಳವರೆಗೆ ರೌರವ ನರಕದಲ್ಲಿಟ್ಟರು, ಪುನಃ ಸುತ್ತಲೂ ಮುಖ ಮಾಡಿಕೊಂಡು ದೀನಭಾವದಿಂದ ಅಳುತ್ತಿರುವ ಆ ಪಾಪಿನಿಯನ್ನು ಎಳೆದುಕೊಂಡು ತಂದು ದಹನಾನನ ಎಂಬ ನರಕಕ್ಕೆ ಹಾಕಿದರು.

ಆಗ ಅವಳ ಕೇಶರಾಶಿಯು ಕೆದರಿಕೊಂಡಿದ್ದವು ಮತ್ತು ಶರೀರವು ಭಯಾನಕವಾಗಿ ಕಂಡುಬರುತ್ತಿದ್ದಿತು. ಈ ಪ್ರಕಾರ ಘೋರ ನರಕಯಾತನೆಯನ್ನು ಅನುಭವಿಸಿದ ಮೇಲೆ ಆ ಮಹಾಪಾಪಿನಿಯು ಈ ಲೋಕಕ್ಕೆ ಬಂದು ಚಾಂಡಾಲರ ಮನೆಯಲ್ಲಿ ಹುಟ್ಟಿದಳು. ಚಾಂಡಾಲರ ಮನೆಯಲ್ಲಿಯೂ ಸಹ ಪ್ರತಿದಿನವೂ ಹೆಚ್ಚುತ್ತಿರುವ ಆ ಪೂರ್ವಜನ್ಮದ ಅಭ್ಯಾಸದಿಂದ ಪೂರ್ವದಂತೆಯೆ ಪಾಪಗಳಲ್ಲಿ ಪ್ರವೃತ್ತಳಾಗಿದ್ದಳು. ಮತ್ತೆ ಅವಳಿಗೆ ಕುಷ್ಠರೋಗ ಮತ್ತು ಕ್ಷಯರೋಗ ಉಂಟಾದವು. ಕಣ್ಣುಗಳಿಗೆ ಬಾಧೆ ಪ್ರಾರಂಭಿಸಿತು. ಸ್ವಲ್ಪ ಕಾಲಾನಂತರ ಅವಳು ಪುನಃ ತನ್ನ ವಾಸಸ್ಥಳ ಭಗವಾನ್ ಶಿವನ ಅಂತಃಪುರದ ಸ್ವಾಮಿನೀ ಜಂಭಕಾದೇವಿಯು ವಿರಾಜಮಾನವಾಗಿರುವ ಹರಿಹರಪುರಕ್ಕೆ ಹೋದಳು. ಅಲ್ಲಿ ಅವಳು ವಾಸುದೇವ ಎಂಬ ಒಬ್ಬ ಪವಿತ್ರ ಬ್ರಾಹ್ಮಣರ ದರ್ಶನ ಮಾಡಿದಳು; ಅವರು ನಿರಂತರ ಗೀತೆಯ ಹದಿಮೂರನೇ ಅಧ್ಯಾಯದ ಅಭ್ಯಾಸ ಮಾಡುತ್ತಾ ಇದ್ದರು. ಅವರ ಮುಖದಿಂದ ಗೀತಾ-ಪಾಠವನ್ನು ಕೇಳಿದ ಕೂಡಲೇ ಅವಳು ಚಾಂಡಾಲ ಶರೀರದಿಂದ ಮುಕ್ತಳಾಗಿ ದಿವ್ಯ ದೇಹವನ್ನು ಧರಿಸಿ ಸ್ವರ್ಗಲೋಕಕ್ಕೆ ಹೊರಟುಹೋದಳು.

ಈ ರೀತಿ ಶ್ರೀ ಮದ್ಭಗವದ್ಗೀತೆಯ ಹದಿಮೂರನೇ ಅಧ್ಯಾಯದ ಮಾಹಾತ್ಮ್ಯೆ ಯಲ್ಲಿ ಬರುವ ಕಥೆಯಲ್ಲಿ ಕೂಡ ಮುನವಳ್ಳಿ ಉಲ್ಲೇಖವಿರುವುದಲ್ಲದೇ ಇದು ಋಷಿಮುನಿಗಳ

ತಪೋಭೂಮಿಯಾಗಿತ್ತು ಎಂಬುದನ್ನು ತಿಳಿಯುತ್ತೇವೆ.ಹೀಗೆ ಭಗವದ್ಗೀತೆಯ ಕಾಲಕ್ಕೂ ಕೂಡ ಮುನವಳ್ಳಿ ತಪೋಭೂಮಿಯಾಗಿತ್ತು ಎಂಬುದನ್ನು ತಿಳಿಯಬಹುದು.

**2.6 ಬ್ರಿಟಿಷ್ ಆಳ್ವಿಕೆಯ ಘಟನೆಗಳು**

1799 ರಲ್ಲಿ ಟಿಪ್ಪುವಿನ ಪತನದೊಂದಿಗೆ ಮೈಸೂರು,ಮಲಬಾರ್.ತಮಿಳ್ನಾಡು,ಆಂದ್ರದ ಹಲವು ಪ್ರದೇಶಗಳು ಬ್ರಿಟಿಷರ ಅಧಿಪತ್ಯಕ್ಕೊಳಪಟ್ಟಿದ್ದವು.ಈ ಸಂದರ್ಭದಲ್ಲಿ ಬ್ರಿಟಿಷರ ವಿರುದ್ಧ ಹಲವು ಬಂಡಾಯಗಳು,ದಂಗೆಗಳು ನಿರಂತರವಾಗಿ ತಲೆಯೆತ್ತತೊಡಗಿದವು.ಆ ಪೈಕಿ ಬ್ರಿಟಿಷ್ ದಾಖಲೆಗಳಲ್ಲಿ ಧೂಂದಿಯಾ ಎಂದು ಉಲ್ಲೇಖಗೊಳ್ಳುವ ಕರ್ನಾಟಕದ ಚನ್ನಗಿರಿಯ ಧೋಂಡಜೀ ವಾಘನ ಬಂಡಾಯು ಬ್ರಿಟಿಷರಿಗೆ ತಲೆನೋವಾಗಿ ಬ್ರಿಟಿಷರು ಇವನ ವಿರುದ್ಧ ಕಾರ್ಯಾಚರಣೆಗೈಯುವುದು ಅನಿವಾರ್ಯವಾಯಿತು.

ಮೇಜರ್ ಜನರಲ್ ಅರ್ಥರ್ ವೆಲ್ಲಸ್ಲಿಯೇ ಇವನ ವಿರುದ್ಧ ಕಾರ್ಯಾಚರಣೆ ಕೈಗೊಂಡನು.ಬ್ರಿಟಿಷ್ ದಾಖಲೆಗಳಲ್ಲಿ ಉಲ್ಲೇಖವಾಗಿರುವ ಧೂಂದಿಯಾ ಎಂದು ಕರೆಯಲ್ಪಟ್ಟಿರುವ ಧೋಂಡಜೀ ವಾಘ ಮೀರಜ್ ನ ಪಟವರ್ಧನ,ಕೊಲ್ಲಾಪುರದ ಛತ್ರಪತಿ ಮೊದಲಾದವರ ಸೇನೆಯಲ್ಲಿ ಹಾಗೂ ಟಿಪ್ಪುವಿನ ಸೇನಾ ವ್ಯವಸ್ಥೆಯಲ್ಲಿ ಸೇವೆ ಸಲ್ಲಿಸಿ ಅನುಭವ ಹೊಂದಿದ್ದನು.ಇವನಿಗೆ ಐಗೂರಿನ ವೆಂಕಟಪ್ಪ ನಾಯಕ.ದಕ್ಷಿಣ ಕನ್ನಡ ಜಿಲ್ಲೆಯ ವಿಟ್ಲದ ಹೆಗ್ಗಡೆ. ಹಾಗೂ ಮೈಸೂರು ಸಂಸ್ಥಾನದ ಮುಸ್ಲಿಂರು ಬೆಂಬಲಕ್ಕಿದ್ದರು. ಸೋಂದಾ. ಹಾನಗಲ್. ಸವಣೂರು. ಸವದತ್ತಿ. ಗದಗ. ಡಂಬಳ ಮೊದಲಾದ ಸ್ಥಳಗಳನ್ನು ವಶಪಡಿಸಿಕೊಂಡ ದೋಂಡಜೀ ವಾಘ ರಾಮದುರ್ಗ.ಸೊಲ್ಲಾಪುರ.ಕೊಲ್ಲಾಪುರ.ಆನೆಗುಂದಿ.ಗ್ವಾಲಿಯರ್ ಇತ್ಯಾದಿ ಅರಸರ ಪ್ರೋತ್ಸಾಹವನ್ನು ಪಡೆದುಕೊಂಡು ಬೆಳೆದಾಗ ಬ್ರಿಟಿಷರಿಗೆ ಇವನ ವಿರುದ್ದ ಕಾರ್ಯಾಚರಣೆಗೈಯುವುದು ಅನಿವಾರ್ಯವಾಯಿತು.

1800 ರಲ್ಲಿ ಧೋಂಡಜೀ ತಲ್ಲೂರಿನಿಂದ 12 ಕಿ.ಮೀ ದೂರ ಮುನವಳ್ಳಿಯಲ್ಲಿ ಬೀಡುಬಿಟ್ಟಿದ್ದನು. ಈ ವಿಷಯ ಬ್ರಿಟಿಷರಿಗೆ ಗೊತ್ತಾಗಿ ಯುದ್ದ ಕೈಗೊಳ್ಳಲು ಚಿಕ್ಕೋಡಿಯಿಂದ 12 ಕಿ.ಮೀ ದೂರದಲ್ಲಿರುವ ನಾಗರ ಮುನ್ನೋಳಿಯ ಕೊಲ್ಲಾಪುರ ಕೋಟೆಯವರು ಇಂಗ್ಲೀಷ ಸೈನಿಕರ ಮೇಲೆ ದಾಳಿ ಮಾಡಲು ವೆಲ್ಲಸ್ಲಿಯ ಗಮನ ಅತ್ತ ಕಡೆಗೆ ಹೋಯಿತು. ಆಗ ಧೋಂಡಜೀ ವಾಘ ಪಲಾಯನಗೈದನು. ಇವನಿಗೆ ಸಹಕರಿಸಿದ್ದಕ್ಕಾಗಿ ಬ್ರಿಟಿಷರು ತಲ್ಲೂರಿನ ದೇಸಾಯಿಯಾಗಿದ್ದ ಚಂದ್ರಪ್ಪನ ಮೇಲೆ ಯುದ್ದ ಸಾರಿದರು. ಈ ಯುದ್ದದಲ್ಲಿ ನಿಪ್ಪಾಣಿಯ ದೇಸಾಯಿ ಸಿದ್ದೋಜಿರಾವ್ ನಿಂಬಾಳ್ಕರ್ ಬ್ರಿಟಿಷರಿಗೆ ಸಹಕರಿಸಿದ.ಕರ್ನಲ್ ಮಾಂತ್ರೆಸರ ಈ ಕಾರ್ಯಾಚರಣೆಯಲ್ಲಿ ತಲ್ಲೂರ ದೇಸಾಯಿ ಕೊಲ್ಲಾಪುರಕ್ಕೆ ಪೈಲಾಯನಗೈಯ್ಯುವಂತಾಯಿತು. ಹೀಗೆ ತಲ್ಲೂರ ದೇಸಾಯಿಯವರಿಗೂ ಧೋಂಡಜೀ ವಾಘನಿಗೂ ಸಂಬಂಧವು ಮುನವಳ್ಳಿಯ ಕೋಟೆಯಲ್ಲಿ ಧೋಂಡಜೀ ನೆಲೆಸಿ ಬ್ರಿಟಿಷರ ವಿರುದ್ದ ಕಾರ್ಯಾಚರಣೆ ಮಾಡುವ ಮಟ್ಟಿಗೆ ಮುನವಳ್ಳಿ ಅಂದಿನ ದೇಸಗತಿ

ಮನೆತನದೊಂದಿಗೆ ಸಂಬಂಧವಿರಿಸಿಕೊಂಡಿರುವುದನ್ನು ತಲ್ಲೂರ ದೆಸಗತಿ ಮನೆತನದ ಇತಿಹಾಸದಿಂದ ತಿಳಿಯಬಹುದು.[7]

ಈ ಸಂದರ್ಭದಲ್ಲಿ ತಲ್ಲೂರಿನ ಕೋಟೆಯನ್ನು ನಿಪ್ಪಾಣಿಯ ದೇಸಾಯಿಯಾದ ಅಂದರೆ ಆ ಸಂದರ್ಭದಲ್ಲಿ ಬ್ರಿಟಿಷರೊಂದಿಗೆ ಸಹಕರಿಸಿದ್ದ ಸಿದ್ದೋಜಿರಾವ್ ನಿಂಬಾಳ್ಕರನಿಗೆ ವಹಿಸಿಕೊಡಲಾಯಿತು.ಇದು ತಲೆಮಾರಿನಿಂದ ತಲೆಮಾರಿಗೆ ಸಾಗಿ ಬಂದ ಜನರ ಹೇಳಿಕೆಯಾಗಿದೆ.ತನ್ನ ಪ್ರದೇಶವನ್ನು ನಾಶ ಮಾಡಿದ ತಲ್ಲೂರ ದೇಸಾಯಿಯ ಮೇಲೆ ಸೇಡು ತೀರಿಸಿಕೊಳ್ಳಲು ನಿಪ್ಪಾಣಿಯ ದೇಸಾಯಿ ತಲ್ಲೂರಿನ ಮೇಲೆ ದಾಳಿ ಮಾಡಿದನು ಅಷ್ಟೇ ಅಲ್ಲದೇ ತಲ್ಲೂರಿನ ದೇಸಗತಿ ಅಗಸಿ ಬಾಗಿಲನ್ನು ಕಿತ್ತು ಮುನವಳ್ಳಿಯ ಅಗಸಿ ಬಾಗಿಲಿಗೆ ಹಾಕಿಸಿದನು ಈ ರೀತಿ ತಲ್ಲೂರ ದೇಸಗತಿಗೂ ಮುನವಳ್ಳಿಗೂ ನಿಕಟ ಸಂಬಂಧವನ್ನು ಇತಿಹಾಸದ ಪುಟಗಳಿಂದ ಗಮನಿಸಬಹುದು.

ಕಿತ್ತೂರು ಒಂದು ಸಣ್ಣ ದೇಸಗತಿಯಾಗಿದ್ದು ನಂತರ ಸರದೇಸಗತಿ ಆಗಿ ಮಲ್ಲಸರ್ಜನ ಆಳ್ವಿಕೆಯ ಕಾಲಕ್ಕೆ ಸಂಪಗಾಂವ,ಬೀಡಿ,ಖಾನಾಪೂರ,ಕಲಘಟಗಿ,ಮುನವಳ್ಳಿ ಮತ್ತು ನರಗುಂದ ವಿಭಾಗಗಳ 286 ಊರುಗಳನ್ನು 72 ಹಳ್ಳಿಗಳನ್ನು ಕಿತ್ತೂರು ಸಂಸ್ಥಾನ ಒಳಗೊಂಡಿತ್ತು.ಇವುಗಳನ್ನು 14 ಕರ್ಯಾತುಗಳಲ್ಲಿ ವ್ಯವಸ್ಥೆಗೊಳಿಸಲಾಗಿತ್ತು.ತದನಂತರ ಸಿರಸಂಗಿ ದೇಸಾಯರ ದೇಸಗತಿಯ ಆಡಳಿತದವರೆಗೂ ಮುನವಳ್ಳಿ ದೇಸಾಯಿ ಮನೆತನದ ದೇಸಗತಿ ಆಡಳಿತಕ್ಕೆ ಒಳಪಟ್ಟ ಸ್ಥಳವಾಗಿತ್ತು. ಬ್ರಿಟಿಷರು ಕಿತ್ತೂರು ಮತ್ತು ಇತರೆ ದೇಸಗತಿಗಳನ್ನು ವಶಪಡಿಸಿಕೊಂಡ ತರುವಾಯ ಬ್ರಿಟಿಷರ ಆಳ್ವಿಕೆಯಲ್ಲಿ ಮುನವಳ್ಳಿ ಅವರ ಸಾಮಂತ ಅರಸರಾದ ತೊರಗಲ್ ನಾಡಿನ ಅರಸರ ಅಧೀನಕ್ಕೆ ಒಳಪಟ್ಟಿತು.

### 2.7 ಸ್ವಾತಂತ್ರ್ಯ ಹೋರಾಟದಲ್ಲಿ ಮುನವಳ್ಳಿ

ಭಾರತದ ಸ್ವತಂತ್ರ್ಯ ಹೋರಾಟದಲ್ಲಿ ಕ್ರ.ಶ.1906 ರಿಂದ 1920 ರ ವರೆಗಿನ ಕಾಲವನ್ನು ತಿಲಕ್ ಯುಗವೆಮದು ಕರೆಯಲಾಗಿದೆ. ಲೋಕಮಾನ್ಯ ಬಾಲಗಂಗಾಧರ ತಿಲಕರೇ ಈ ಯುಗದ ಆದ್ಯ ಪ್ರವರ್ತಕರು.ಅವರಿಗೆ ಹಿಂಬಾಲಕರಾಗಿ ಲಾಲಾ ಲಜಪತರಾಯ್.ಬಿಪಿನ್ ಚಂದ್ರಪಾಲ್,ಸುರೇಂದ್ರನಾಥ ಬ್ಯಾನರ್ಜಿ ಮೊದಲಾದವರು ಸಹಾಯಕರಾಗಿದ್ದರು.ಈ ತಿಲಕ್ ಯುಗದ ಸಮಯದಲ್ಲಿ ಬೆಳಗಾವಿ ಜಿಲ್ಲೆ ಸ್ವಾತಂತ್ರ್ಯದ ಹೋರಾಟದ ಕೇಂದ್ರವಾಗಿತ್ತು.

ತಿಲಕರು ತಮ್ಮ ಹೋರಾಟದ ಫಲವಾಗಿ ಬ್ರಿಟಿಷರಿಗೆ ಸಂಶಯ ಮೂಡದ ಹಾಗೆ ಶಿವಾಜಿ ಉತ್ಸವ,ಗಣೇಶ ಉತ್ಸವ ಹಬ್ಬಗಳ ಆಚರಿಸುವ ಮೂಲಕ ಸ್ವಾತಂತ್ರ್ಯ ಹೋರಾಟ ನಡೆಸಿದರು. 1931 ರಲ್ಲಿ ಮುನವಳ್ಳಿಯಲ್ಲಿ ಗಜಾನನ ಉತ್ಸವ ಆಚರಿಸಿ ಗಜಾನನ ಮೂರ್ತಿಗೆ ಗಾಂಧಿ ಟೋಪಿಯನ್ನು ಹಾಕಿದರು. ಈ ಉತ್ಸವಕ್ಕೆ ಕರ್ನಾಟಕದ ಗಾಂಧಿಯೆಂದು

---

7. ಎಸ್. ಬಿ. ದೇಶನೂರ, "ತಲ್ಲೂರ ದೇಸಗತಿ" (ಬೆಳಗಾವಿ ಜಿಇಲ್ಲೆಯ ಇತಿಹಾಸ ಮತ್ತು ಪುರಾತತ್ವ, ಸಮಫಾದಕರು ಆರ್. ಗೋಪಾಲ್) ಪುಟ – 483

ಹೆಸರುವಾಸಿಯಾದ ಹರ್ಡೇಕರ ಮಂಜಪಪ್ಪನವರು ಆಗಮಿಸಿದ್ದರು.ಈ ರೀತಿ ತಿಲಕ್ ರ ಸ್ವಾತಂತ್ರ್ಯ ಹೋರಾಟದ ಪ್ರಭಾವ ಇಲ್ಲಿನ ಜನರ ಮೇಲಾಯಿತು. ನಂತರದ ದಿನಗಳಲ್ಲಿ ಇದು ಉಗ್ರ ಸ್ವರೂಪ ಪಡೆಯುತ್ತ ಸಾಗಿತು.[8]

ಉಪ್ಪಿನ ಸತ್ಯಾಗ್ರಹವು ಸ್ವಾತಂತ್ರ್ಯ ಚಳುವಳಯ ಪ್ರಥಮ ಹಂತವಾಗಿದ್ದು ಸ್ವಾತಂತ್ರ್ಯ ದೊರೆಯುವವರೆಗೂ ಈ ಸತ್ಯಾಗ್ರಹ ವಿವಿಧ ರೂಪಗಳಲ್ಲಿ ಮುಂದುವರಿಯಿತು.ಈ ಉಪ್ಪಿನ ಸತ್ಯಾಗ್ರಹವನ್ನು ಮುನವಳ್ಳಿಯಲ್ಲಿ ಚನ್ನಬಸವ ಮರಿದೇವರು ಜಾಹೀರ ಸಭೆಯಲ್ಲಿ ಉಪ್ಪು ಲೀಲಾವು ಮಾಡಿದರು.ಅದನ್ನು ಶಿವಪ್ಪ ಬೆಳವಲಗಿಡದ.ಕಿಲ್ಲೇದಾರ.ಚಂದ್ರವ್ವ ನೀಲಗಾರ ಮುಂತಾದವರು ಕೊಂಡು ಕೊಂಡರು. ಇದಕ್ಕಾಗಿ ಬ್ರಿಟಿಷರು ಇವರನ್ನು ಬಂಧಿಸಿದರು,ಬಂಧಿತರಾದ ಸ್ವಾಮಿಗಳನ್ನು ಸನ್ಮಾನ ಮಾಡಿ ಕಳುಹಿಸಿದರು.

ಇನ್ನು ಡಾ:ಸರೋಜನಿ ಚವಲಾರ ಇವರ "ಬೆಳಗಾವಿ ಜಿಲ್ಲೆಯ ಸ್ವಾತಂತ್ರ್ಯ ಹೋರಾಟಗಾರರು" ಕೃತಿಯಲ್ಲಿ ಶ್ರೀ ಶಿವಮೂರ್ತಯ್ಯ ಪರವಯ್ಯಸ್ವಾಮಿ ಹಿರೇಮಠ ಇವರ ಸ್ವಾತಂತ್ರ್ಯ ಹೋರಾಟದ ಘಟನೆಗಳನ್ನು ತಿಳಿಸಿರುವರು. ಶಿವಮೂರ್ತಯ್ಯ ಸ್ವಾಮಿಗಳು 26–8–1913 ರಲ್ಲಿ ಮುನವಳ್ಳಿಯಲ್ಲಿ ಜನಿಸಿದರು.1928–29 ರಲ್ಲಿ ಡಾಃಜೋಶಿ,ಪಾಶ್ಚಾಪೂರ ಇವರಲ್ಲಿಯೂ.1932 ರಲ್ಲಿ ಸ್ವಪ್ರಯತ್ನದಿಂದ ಹಾಗೂ ಡಾಃಎನ್.ಎಸ್.ಹರ್ಡಿಕರ ಇವರಲ್ಲಿಯೂ ಮಲ್ಲಪ್ಪ ಕೋಳೂರ.ಆರ.ಬಿ.ಯಡವಿ.ಚನ್ನಪ್ಪ ವಾಲಿ.ಎಸ್.ಆರ್.ಕಂಠಿ.ಇವರೆಲ್ಲರ ದುರೀಣತ್ವದಲ್ಲಿ ಮತ್ತು ಮಹಾಲಿಂಗಪ್ಪ ಮುರಗೋಡ ಇವರೆಲ್ಲರ ಸಂಗಡ ಸ್ವಾತಂತ್ರ್ಯ ಹೋರಾಟದಲ್ಲಿ ಭಾಗವಹಿಸಿದರು.

ಇವರು ಹೋರಾಟದಲ್ಲಿ ಭಾಗವಹಿಸಿದ ಘಟನೆಗಳು ಈ ಕೆಳಗಿನಂತಿವೆ

1) ಪಾಶ್ಚಾಪುರದಲ್ಲಿ ಸಿಂಧಿ ಗಿಡ ಕಡಿಯಲು ಹೋದದ್ದು.ಹುಕ್ಕೇರಿಗೆ ಹೋಗಿ ಸತ್ಯಾಗ್ರಹ ಫಾರ್ಮ ತುಂಬಿ ನಂತರ ಇವರು ಕೊಣ್ಣೂರಿನಲ್ಲಿ ಕಾಂಗ್ರೇಸ್ ಬಗ್ಗೆ ಜನರಲ್ಲಿಯ ಸ್ವಾತಂತ್ರ್ಯದ ಕಾರ್ಯಗಳನ್ನು ವಿವರಿಸಿದರು.

2) ಸ್ವತಃ 14 ಜನರೊಡಗೂಡಿ ಸತ್ಯಪ್ಪಾ ಅರಬಾವಿಯವರ ನೇತೃತ್ವದಲ್ಲಿ ಸಿಂದಿ ಗಿಡ ಕಡಿಯಲು ಹೋಗಿ ಅಲ್ಲಿ ಪೋಲಿಸರ ಕಾವಲಿದ್ದರೂ ಲೆಕ್ಕಿಸದೆ ಗಿಡ ಕಡಿದು ಬಂಧಿತರಾದರು.ಆದರೂ ಕೂಡ ಆಗ ಗಾಂಧೀ ಆಯುರ್ವಿನ ಒಪ್ಪಂದದ ಪ್ರಕಾರ ತಾತ್ಪೂರ್ತಿಕ ಬಿಡುಗಡೆಯಾಯಿತು.

3) ಸೇವಾದಳ ಶಿಕ್ಷಣವನ್ನು ಆನಗೋಳದಲ್ಲಿ ಪಡೆದು ಕೊಣ್ಣೂರಿನಲ್ಲಿ ಪಡೆದು ತಾವು ಕೂಡ 50 ಜನರಿಗೆ ತರಗತಿ ನೀಡಿದರು.1932 ರಲ್ಲಿ ಪಿಕೇಟಿಂಗ ಮಾಡಿದ್ದರಿಂದ 6 ತಿಂಗಳು ಶಿಕ್ಷೆ 100 ರೂಪಾಯಿ ದಂಡವನ್ನು ಇವರಿಗೆ ವಿಧಿಸಲಾಯಿತು.ದಂಡವನ್ನು ಕೊಡಲು ಆಗದ್ದರಿಂದ 4ನೇ ಆರ್ಡಿನನ್ಸನ ಪ್ರಕಾರ ಶಿಕ್ಷೆಯನ್ನು ಮತ್ತೆ ಒಂದೂವರೆ ತಿಂಗಳು ಅನುಭವಿಸಬೇಕಾಯಿತು.

8. ಮಲ್ಲಿಕಾರ್ಜುನ, ರಾ. ಜರಕುಂಟೆ, 'ಸವದತ್ತಿ ತಾಲೂಕಿನ ಸ್ವಾತಂತ್ರ್ಯ ಹೋರಾಟ', (ಬೆಳಗಾವಿ ಜಿಲ್ಲೆಯ ಇತಿಹಾಸ ಮತ್ತು ಪುರಾತತ್ವ ಸಂಪಾದಕರು ಆರ್. ಗೋಪಾಲ್)

4) 1942 ರ ಚಲೇಜಾವ್ ಚಳುವಳಿಯಲ್ಲಿ ಜನರಲ್ಲಿ ಸ್ವಾತಂತ್ರ್ಯದ ಭಾವನೆ ಹುರಿದುಂಬಿಸುವ ಸಲುವಾಗಿ ವಿಧಾಯಕ ಕಾರ್ಯಗಳನ್ನು ಮಾಡಿ ಪಣ ತೊಟ್ಟು ಹೋರಾಡುವಂತೆ ಸಭೆಗಳಲ್ಲಿ ತಿಳಿಸುತ್ತಿದ್ದರು ಈ ರೀತಿ ಅನೇಕ ರೀತಿಯಲ್ಲಿ ಸ್ವಾತಂತ್ರ್ಯ ಹೋರಾಟ ಮಾಡಿದ ಬಗ್ಗೆ ಡಾ:ಸರೋಜನಿ ಚವಲಾರ ಇವರ "ಬೆಳಗಾವಿ ಜಿಲ್ಲೆಯ ಸ್ವಾತಂತ್ರ್ಯ ಹೋರಾಟಗಾರರು" ಕೃತಿಯಲ್ಲಿ ಶ್ರೀ ಶಿವಮೂರ್ತಯ್ಯ ಪರವಯ್ಯಸ್ವಾಮಿ ಹಿರೇಮಠ ಇವರ ಸ್ವಾತಂತ್ರ್ಯ ಹೋರಾಟದ ಘಟನೆಗಳನ್ನು ತಿಳಿಸಿರುವರು

1942 ರ ಚಲೇಜಾವ್ ಚಳುವಳಿಯಲ್ಲಿ ಮುನವಳ್ಳಿ.ಹೂಲಿ.ಹಿರೇ ಉಳ್ಳಿಗೇರಿ,ಹೊಸೂರ ಮೊದಲಾದ ಸ್ಥಳಗಳಲ್ಲಿ ಗುಂಪುಗಳಲ್ಲಿ ಸಂಘಟನೆಯಾದ ಜನರು ಹೋರಾಟ ತೀವ್ರಗೊಳಿಸಿದರು. ಮುನವಳ್ಳಿಯಲ್ಲಿ ನರಗುಂದದಿಂದ ಟಪಾಲ ಗಾಡಿಯು ಮುನವಳ್ಳಿಯ ಬಸ್ ನಿಲ್ದಾಣದಲ್ಲಿ ನಿಂತಾಗ ಅದರ ಕಾವಲುಗಾರರಾಗಿ ಮೂವರು ಪೋಲಿಸರು ಇದ್ದರಂತೆ ಅದರಲ್ಲಿ ಇಬ್ಬರು ಗಾಡಿಯಿಂದ ಇಳಿದು ಚಹಾ ಕುಡಿಯಲು ಚಹಾದ ಅಂಗಡಿಗೆ ಬರಲು ಗೋವಿಂದರಡ್ಡಿಯವರ ಗುಂಪಿನಲ್ಲಿದ್ದ ಪರಪ್ಪ ಹುರುಳಿ.ಚನ್ನಪ್ಪ ಮರಗಣವಿ,ಗವಿಯಪ್ಪ.ಬೆಳವಡಿ.ಹಣಮಂತಪ್ಪ ಬೇವಿನಗಿಡದ.ಮಲ್ಲೇಶಪ್ಪ ಗೋಮಾಡಿ, ಬಸವರಾಜ ದೀವಟಗಿ, ಸಿದ್ದಯ್ಯ ಅಮೋಘಮಠ, ಪಾಂಡುರಂಗ ಮಿರಜಕರ, ಬಾಳಪ್ಪ ಯಡಾಲ, ವೀರಪ್ಪ ಅಂಗಡಿ ಮೊದಲಾವರು ಪೂರ್ವಯೋಜನೆಯ ಪ್ರಕಾರ ಇಬ್ಬರೂ ಪೋಲಿಸರನ್ನು ಹಿಡಿದರು.ಕೆಲವರು ಬಸ್ ಹತ್ತಿ ಅಲ್ಲಿದ್ದ ಪೋಲಿಸನ ಕೈಯಲ್ಲಿನ ಬಂದೂಕು ಕಸಿದುಕೊಂಡರು ಮತ್ತು ಟಪಾಲುಗಳನ್ನು ಸುಟ್ಟು ಹಾಕಿದರು ಇವರನ್ನೆಲ್ಲ ಬ್ರಿಟಿಷರು ಬಂಧಿಸಿದಾಗ ಸೆಶನ್ ಕೋರ್ಟನಲ್ಲಿ ಖಟ್ಲೆ ನಡೆದು ಎಲ್ಲರೂ ನಿರ್ದೋಷಿಗಳೆಂದು ಬಿಟ್ಟರು.

ಸವದತ್ತಿ ತಾಲೂಕಿನಲ್ಲಿ ಸ್ವಾತಂತ್ರ್ಯ ಹೋರಾಟಗಾರರ ಗುಂಪುಗಳು ಪರಸ್ಪರ ಸೇರಿಕೊಂಡು ಅನೇಕ ಕಡೆಗಳಲ್ಲಿ ತಮ್ಮ ಚಟುವಟಿಕೆಗಳನ್ನು ಕೈಗೊಂಡಿದ್ದರು.ಮುನವಳ್ಳಿಯ ಪಾಂಡುರಂಗ ಮಿರಜಕರ. ಮಲ್ಲೇಶಪ್ಪ. ಗೋಮಾಡಿ. ಚನ್ನಬಸಪ್ಪ ಮತ್ತು ಪಂಚಪ್ಪ ಸದಾವರ್ತಿ.ನಿಂಗಪ್ಪ ಹುರಕಡ್ಲಿ.ಪಂಚಪ್ಪ ಹಂಜಿ,ನಿಂಗಪ್ಪ ಗಿಜಿ.ಪರಸಪ್ಪ ಸಿರಸಂಗಿ.ಯಲ್ಲಪ್ಪ ಅಬ್ಬಾರ.ನಿಂಗಪ್ಪಗೌಡ ಮಲಗೌಡ.ಪತ್ರಯ್ಯ.ಮಠಪತಿ ಮೊದಲಾದವರು ಈ ಗುಂಪಿನಲ್ಲಿ ಕೆಲಸ ಮಾಡುತ್ತಿದ್ದರು. ಈ ಗುಂಪಿನವರು ಮುನವಳ್ಳಿ ಚಾವಡಿ ಪೋಲಿಸ್ ಸ್ಟೇಷನ್ ಮತ್ತು ಗೆಸ್ಟ ಹೌಸ್ ಸುಟ್ಟರು. ಮುನವಳ್ಳಿ ಸೆರೆ ಸಿಂಧಿ ಗಾಂಜಾ ಅಂಗಡಿಗಳಲ್ಲಿಯ ಮಾದಕ ಪದಾರ್ಥಗಳನ್ನು ನಾಶ ಮಾಡಿದರು.ಮತ್ತು ಸಿಂಧಿ ಮೋಟಾರು ವಾಹನವನ್ನು ಸುಟ್ಟರು, ಅರಟಗಲ್, ಬಸರಗಿ, ಕಿಟದಾಳ ಮತ್ತು ಹಿರೂರ ಗ್ರಾಮದ ದಫ್ತರ ಸುಟ್ಟು ಹಳಬರ ಕತ್ತಿಗಳನ್ನು ಕಸಿಯಲಾಯಿತು.ಕಟಕೋಳ ಕಚೇರಿಯ ಮೇಲೆ ದಾಳಿ ಮಾಡಿದಾಗ ಗುಂಡಿನ ಚಕಮಕಿ ನಡೆಯಿತು ಆಗ ಇವರು ಸೆರೆಸಿಕ್ಕು ಗಡಹಿಂಗ್ಲಜ ಜೈಲಿನಲ್ಲಿ ಎರಡು ವರ್ಷದವರೆಗೆ ಕೈದಿಗಳಾಗಿ ಇರುವಂತಾಯಿತು,

21 ಮತ್ತು 22 ಡಿಸೆಂಬರ್ 1942 ರ ಸಂಯುಕ್ತ ಕರ್ನಾಟಕ ದಿನಪತ್ರಿಕೆಯ ಪ್ರಕಾರ ಮುನವಳ್ಳಿ ಗ್ರಾಮ ಪಂಚಾಯತಿ ರಿಕಾರ್ಡ,ಗುರ್ಲಹೊಸೂರ ಹಾಗೂ ಧೂಪದಾಳ ಚಾವಡಿ, ಯಕ್ಕುಂಡಿ ಬಂಗಲೆ,ಮದ್ಲೂರ ಛಾವಡಿ.ಅಸುಂಡಿ ಸೊಸಾಯಿಟಿಯಲ್ಲಿರುವ ದಪ್ತರಗಳನ್ನು ಸುಡುವ ಮೂಲಕ ಸ್ವಾತಂತ್ರ್ಯದ ಹೋರಾಟ ತೀವ್ರ ಸ್ವರೂಪವನ್ನು ಪಡೆಯಿತು. ಒಟ್ಟಾರೆ 13-8-1942 ರಿಂದ ಭೂಗತವಾಗಿದ್ದುಕೊಂಡು ಅನೇಕ ಚಟುವಟಿಕೆಗಳನ್ನು ಮಾಡಿದ್ದು ಇದರಲ್ಲಿ ಮಹಿಳೆಯರೂ ಅವರಿಗೆ ಪ್ರೋತ್ಸಾಹ ನೀಡಿದ್ದು ಗಮನಾರ್ಹ ಸಂಗತಿಯಾಗಿದೆ.ಈ ಸ್ವಾತಂತ್ರ್ಯ ಯೋಧರು ಇಂಥ ಘಟನೆಗಳನ್ನು ವಿವರಿಸುತ್ತ ತಮ್ಮ ಹೋರಾಟ "ದೇಶವನ್ನು ಆಂಗ್ಲರ ಆಳ್ವಿಕೆಯಿಂದ ಮುಕ್ತಗೊಳಿಸಿ ನಮ್ಮ ದೇಶದ ತ್ರಿವರ್ಣ ಧ್ವಜವನ್ನು ಎತ್ತಿ ಹಿಡಿದೆವು ಎಂಬ ತೃಪ್ತಿ ನಮಗಿದೆ"ಎಂದು ಇಂದಿನ ಸಂದರ್ಭದಲ್ಲಿ ಆ ಕಾಲಘಟ್ಟದಲ್ಲಿ ಆಗಿರುವ ಘಟನೆಗಳನ್ನು ನೆನೆಯುತ್ತಾರೆ.

ಮುನವಳ್ಳಿಯ ಸ್ವಾತಂತ್ರ್ಯ ಹೋರಾಟಗಾರರಲ್ಲಿ ಪ್ರಮುಖರೆಂದರೆ ನಿಂಗಪ್ಪ ಚಿಕ್ಕುಂಬಿ, ಮಲ್ಲೇಶಪ್ಪ, ಗೋವಾಡಿ, ಪಾಂಡಪ್ಪ.ಮಿರಜಕರ,ತುಕ್ಕಪ್ಪ ಮುಚ್ಚಂಡಿ, ಹೊಳೆಪ್ಪ ಮುಚ್ಚಂಡಿ(ಪೈಲವಾನ್), ಪಂಚಪ್ಪ ಸಿರಸಂಗಿ, ಭೀಮಶಿ ತಳವಾರ, ಗದಿಗೆಪ್ಪ ಕಮತಗಿ, ಚನ್ನಬಸವ ಸ್ವಾಮಿಗಳು(ಸೋಮಶೇಖರ ಮಠ), ಚನ್ನಯ್ಯ ಹಿರೇಮಠ.ಕರಿಬಸಯ್ಯ.ಹಿರೇಮಠ,ಮಡಿವಾಳಪ್ಪ ತಿರಕಣ್ಣವರ, ಚನ್ನಬಸಪ್ಪ ಸದಾವರ್ತಿ, ಮಲ್ಲೇಶಪ್ಪ ನವಲಗುಂದ, ರಾಚಯ್ಯ ಸಂಬಾಳಮಠ, ಶಿವಪ್ಪ ಬೆಳವಲಗಿಡದ, ಪತ್ರಯ್ಯ, ಮಠಪತಿ, ಅಂದಾನೆಪ್ಪ ಕುಂಬಾರ, ಮದಾರಸಾಬ, ಬೈರಖದಾರ, ಬಾಬುಸಾಬ, ಬಿಜಲಿಖಾನ್ ಮೊದಲಾದವರು ಚಲೇಜಾವ್ ಚಳುವಳಿಯಲ್ಲಿ ಭೂಗತ ಹೋರಾಟಗಳನ್ನು ತೀವ್ರಗತಿಯಲ್ಲಿ ನಡೆಸಿದರು, ಇವರಲ್ಲಿ ಕೆಲವರು ಬಂಧನಕ್ಕೊಳಗಾಗಿ ಶಿಕ್ಷೆಗೆ ಗುರಿಯಾದರು.

ಯಾವಾಗಲೂ ಭೂಗತರಾಗಿ ತಿರುಗಾಡುತ್ತಿದ್ದ ಹೋರಾಟಗಾರರನ್ನು ಬಂಧಿಸಲು ಎಲ್ಲ ಕಡೆಗೂ ಬ್ರಿಟಿಷ್ ಗುಪ್ತಪಡೆ ತೀವ್ರಗತಿಯಲ್ಲಿ ಕಾರ್ಯ ಪ್ರಾರಂಬಿಸಿದಾಗ ಮುನವಳ್ಳಿಯಲ್ಲಿ ಪಾಂಡಪ್ಪ ಮಿರಜಕರ,ವೀರಪ್ಪ ದಡೇದ, ಚನ್ನಬಸಪ್ಪ ಅವರಾದಿ, ಮಲ್ಲೇಶಪ್ಪ ನವಲಗುಂದ.ಇವರನ್ನು ಬಂಧಿಸಿ ಚನ್ನಯ್ಯ ಹಿರೇಮಠ ಸಿಗದಿದ್ದರಿಂದ ಅವರ ತಾಯಿ ಮತ್ತು ಅವರ ತಮ್ಮನನ್ನು ಪೋಲಿಸರು ಎಳೆದುಕೊಂಡು ಹೋಗಿ ಈ ಎಲ್ಲರ ಮೇಲೆ ಕೊಲ್ಲಾಪುರ ಸಂಸ್ಥಾನ ವಾರಂಟಗಳನ್ನು ಹೊರಡಿಸಿದರು.ಇವರನ್ನು ಮುನವಳ್ಳಿಯಿಂದ ಸವದತ್ತಿ ಕೋರ್ಟಗೆ ಕರೆದೊಯ್ದು ವಿಚಾರಣೆ ನಡೆಸುವುದನ್ನು ಕಣ್ಣಾರೆ ಕಾಣಲು ಮುನವಳ್ಳಿಯಿಂದ ಎತ್ತಿನ ಬಂಡಿಯಿಂದ ಹೊರಟ ಸ್ವಾತಂತ್ರ್ಯಪ್ರೇಮಿ ಇವರ ಅಭಿಮಾನಿ ಜನರು ನವಿಲುತೀರ್ಥದ ಮುನವಳ್ಳಿ ಕಡೆಯ ಇಳಿಜಾರಿನವರೆಗೂ ಸಾಲಾಗಿ ನಿಂತಿದ್ದರಂತೆ ಅಂದರೆ ಇವರ ಸ್ವಾತಂತ್ರ್ಯ ಹೋರಾಟದ ಬಗ್ಗೆ ಅಭಿಮಾನ ಹೊಂದಿದ್ದ ಜನರು ಇವರನ್ನು ಬ್ರಿಟಿಷರು ಕರೆದುಕೊಂಡು ಹೋಗಿದ್ದನ್ನು ಕಾಣಲು ಚಕ್ಕಡಿಗಳಲ್ಲಿ ಸವದತ್ತಿಯತ್ತ ಹೊರಟ ಘಟನೆಯನ್ನು ರಾಚಯ್ಯ ಸಂಭಾಳಮಠ ಇವರ ಮಗ ಶ್ರೀಶೈಲಸ್ವಾಮಿ ಸಂಭಾಳಮಠ ನೆನೆದು ಅಪಾರ ಜನಸ್ತೋಮ ಸೇರಿ ಇವರ ಹೋರಾಟಕ್ಕೆ

ಬೆಂಬಲ ಸೂಚಿಸಿತ್ತು.ಈ ಹೋರಾಟಗಾರರು ಬ್ರಿಟಿಷರಿಗೆ ಕಳ್ಳಿಗಿಡ ಹಾಲನ್ನು ಹಾಲಿನಲ್ಲಿ ಬೆರೆಸಿ ಕುಡಿಸಿದ್ದರು ಅಷ್ಟೇ ಅಲ್ಲ ಕೆಲವು ಬ್ರಿಟಿಷ ಸೈನಿಕರ ಮೂಗು ಕತ್ತರಿಸಿದ್ದರು ಎಂದು ಹಿರಿಯರು ಹೇಳುತ್ತಿದ್ದ ಘಟನೆಗಳನ್ನು ನೆನಪಿಸಿಕೊಂಡು ಅವರ ಹೋರಾಟದ ಸ್ವರೂಪ ಎಷ್ಟು ತೀವ್ರವಾಗಿತ್ತು ಎಂಬುದನ್ನು ತಿಳಿಸುವರು.[9]

ಹೀಗೆ ಚಲೇಜಾವ್ ಚಳುವಳಿಯು 1946 ರ ವರೆಗೂ ನಡೆಯಿತು. ನಂತರ ಜೈಲುವಾಸವನ್ನು ಅನುಭವಿಸಿ ಗಡಿಪಾರು ಶಿಕ್ಷೆಯನ್ನು ಮುಗಿಸಿ ಒಬ್ಬೊಬ್ಬರಾಗಿ ಬಿಡುಗಡೆಯಾಗಿ ಬರತೊಡಗಿದರು. ನಂತರದ ದಿನಗಳಲ್ಲಿ ಅಷ್ಟೇನೂ ಹೋರಾಟ ತೀವ್ರ ಸ್ವರೂಪ ಪಡೆಯದೇ ಧ್ವಜವಂದನಾ ಕಾರ್ಯಕ್ರಮಗಳು,ಖಾದಿ ಪ್ರಚಾರ.ರಾಷ್ಟ್ರೀಯ ಸೇವಾದಳದ ಕಾರ್ಯಗಳು ಮುಂದುವರೆದುಕೊಂಡು ಬಂದವು.ಮುಂದೆ ಎರಡು ವರ್ಷಗಳ ನಂತರ 1947 ಅಗಸ್ಟ 14 ಅಮವಾಸೆಯ ಮಧ್ಯರಾತ್ರಿ ಕಳೆದ ಕೆಲ ಕ್ಷಣಗಳಲ್ಲಿ ಸ್ವತಂತ್ರ ಭಾರತದ ಉದಯವನ್ನು ಸ್ವಾಗತಿಸುವ ಮೂವತ್ತೊಂದು ಕುಶಾಲ ತೋಪುಗಳು ಮೊಳಗಿದವು.1818 ರಿಂದ ಆರಂಭಿಸಿ 130 ವರ್ಷದವರೆಗಿನ ಜಾಕ್ ಧ್ವಜ ಕೆಳಗಿಳಿಯುವ ಮೂಲಕ ಆ ಜಾಗೆಯಲ್ಲಿ ನಮ್ಮ ಸ್ವಾತಂತ್ರ್ಯದ ಧ್ವಜ ಹಾರಾಡಿತು.



9. ಡಾ. ಸರೋಜಿನಿ ಚವಲಾರ, "ಬೆಳಗಾವಿ ಜಿಲ್ಲೆಯ ಸ್ವಾತಂತ್ರ್ಯ ಹೋರಾಟಗಾರರು", ಪುಟ 253.

# ಅಧ್ಯಾಯ – ಮೂರು

# ಮುನವಳ್ಳಿಯ ಪ್ರಸಿದ್ಧ ದೇವಾಲಯಗಳು

ಮುನವಳ್ಳಿಯ ಧಾರ್ಮಿಕ ಕೇಂದ್ರವಾಗಿ ಸರ್ವಧರ್ಮ ಸಮನ್ವಯತೆಯನ್ನು ಅನೇಕ ಜಾತಿ ಧರ್ಮ ಆಚರಣೆಗಳಿಂದ ಸಮಾನತೆಯ ತತ್ವದಲ್ಲಿ ಸಾಗಿಕೊಂಡು ಬರುವ ಮೂಲಕ ತನ್ನದೇ ಆದ ಐತಿಹ್ಯವನ್ನು ಹೊಂದಿದೆ.ಇಲ್ಲಿ ಪಂಚಲಿಂಗೇಶ್ವರ ದೇವಾಲಯ ಮೊದಲುಗೊಂಡು ರುದ್ರಪಶುಪತಿಮರುಲೂರ ಮಠ, ಸೋಮಶೇಖರ ಮಠ, ಕಂಬಿಮಠ, ಸಾಲಿಮಠ, ಚಂದ್ರಶೇಖರ ಮಠ, ವಿರಕ್ತಮಠ, ಶಂಕರಲಿಂಗ ದೇವಾಲಯ, ಅಕ್ಕಮಹಾದೇವಿ ದೇವಸ್ಥಾನ, ಸಾವಳಗಿಮಠ, ಬನಶಂಕರಿ ದೇವಾಲಯ, ವಿಠ್ಠಲ ಮಂದಿರ, ದಾನಮ್ಮದೇವಿ ಮಂದಿರ, ವೀರಭದ್ರ ದೇವಾಲಯ, ಹನುಮಾನ ಮಂದಿರ, ಉಡಚಮ್ಮ ದೇವಾಲಯ, ವೆಂಕಟೇಶ್ವರ ದೇವಾಲಯ, ರಾಘವೇಂದ್ರ ಸ್ವಾಮಿಗಳ ವೃಂದಾವನ, ಗಣಪತಿ ದೇವಾಲಯ, ಕಾಳಿಕಾ ದೇಗುಲ, ಕರಿಯಮ್ಮನ ದೇವಾಲಯ, ಅಂಭಾಭವಾನಿ, ದತ್ತಾತ್ರೇಯ, ಗೂಳಿ ಬಸವಣ್ಣ, ಬ್ಯಾಳಿ ಬಸವಣ್ಣ, ಸಾಯಿ ಮಂದಿರ, ಆಂಜನೇಯ, ಬಸವ ನಗರದ ಬಸವಣ್ಣ ದೇವಾಲಯ. ಮಸೀದೆಗಳು, ಈದಗಾ ಮೈದಾನ, ಮದರಸಾ, ಭೀಮಾಶಂಕರ, ಆದಿಶೇಷ, ಶಿವ ಪಂಚಾಯತನ ದೇವಾಲಯ ಹೀಗೆ ಅನೇಕ ದೇವಾಲಯಗಳನ್ನು ಮಠಮಾನ್ಯಗಳನ್ನು ತಮ್ಮದೇ ಆದ ಧಾರ್ಮಿಕ ಚಟುವಟಿಕೆಗಳ ಮೂಲಕ ಪ್ರಸಿದ್ಧಿ ಹೊಂದಿದ್ದು, ಇಲ್ಲಿನ ಕೋಟೆಯಲ್ಲಿರುವ ಉಡಚವ್ವನ ದೇವಾಲಯ ಶಾಸನದಲ್ಲಿ ತೊರಗಲ್ ನಾಡಿನ ಒಂದು ಭಾಗ ಎಂದೂ ಇಲ್ಲಿ ಆಗಿನ ರಾಜರು ವಿಶ್ರಾಂತಿಗೋಸ್ಕರ ಹೂದೋಟ ನಿರ್ಮಿಸಿದ್ದರೆಂಬ ಅಂಶವಿದೆ ಈ ಕೋಟೆಯ ಒಳಗೆ ಆಂಜನೇಯ ದೇವಾಲಯ, ಪುರಾತನ ಬಾವಿ ಉಡಚವ್ವ ದೇಗುಲಗಳು ಗಮನಸೆಳೆಯುತ್ತವೆ.

ಇಲ್ಲಿ ಇನ್ನೂ ಹಲವಾರು ವೈಶಿಷ್ಟ್ಯಗಳಿವೆ. ಅಕ್ಕಮಹಾದೇವಿ ಮಠ, ಹಿರೇಮಠ, ಅಷ್ಠಗಿಮಠ, ವಿರಕ್ತಮಠ, ಸಂಭಾಳಮಠ, ಪಶುಪತಿ ಮಠ,ಚಂದ್ರಶೇಖರ ಮಠ.ಸಾಲಿಮಠ.ಘಟವಾಳಿಮಠ ಹಿರೇಮಠ ಮೊದಲಾದ ಮನೆತನಗಳು ಮಠಗಳು ಗಮನ ಸೆಳೆಯುತ್ತವೆ.ಇಲ್ಲಿರುವ ಸಾಲಿಮಠದಲ್ಲಿನ 5ನೇ ಸ್ಥಿರ ಪಟ್ಟಾಧಿಕಾರಿಗಳಾದ ಶ್ರೀ ಚಿದ್ಬವಲಿಂಗ ಶಿವಾಚಾರ್ಯರು ಮತ್ತು 12ನೇ ಸ್ಥಿರ ಪಟ್ಟಾಧಿಕಾರಿಗಳಾದ ಶ್ರೀ ಚಿದ್ಬವಲಿಂಗ ಶಿವಾಚಾರ್ಯರ ಜೋಡು ಗದ್ದುಗೆಗಳು. ಚಂದ್ರಶೇಖರ ಮಠದಲ್ಲಿನ ಚಂದ್ರಶೇಖರ ಶಿವಾಚಾರ್ಯರ ಕರ್ತೃ ಗದ್ದುಗೆ. ಪಶುಪತಿಮಠ ಕಂಬಿಮಠದಲ್ಲಿನ ಜೋಡು ಗದ್ದುಗೆಗಳ ಜೀರ್ಣೋದ್ಧಾರದ ಜೊತೆಗೆ ಆ ಮಠದ ಪರಂಪರೆಯನ್ನು ಕೂಡ ಸಂಶೋಧಿಸಬೇಕಾಗಿದ್ದು ಮುನವಳ್ಳಿ ಮುನಿಪುರದ ದಾಖಲೆಗೆ ಎಲ್ಲ ದಾಖಲೆಗಳೂ ಕೂಡ ಪುರಾವೆಯಾಗಿ ನಿಲ್ಲುವುದರಲ್ಲಿ ಸಂದೇಹವಿಲ್ಲ.

ಅಲ್ಲದೇ ಇತ್ತೀಚಿಗೆ ನಿರ್ಮಾಣಗೊಂಡ ಸಾಯಿಮಂದಿರದ ಕಾರ್ಯಕ್ರಮಗಳು. ಕಳೆದ ಹನ್ನೆರಡು ವರ್ಷಗಳಿಂದ ಜರುಗುತ್ತಿರುವ ನಾಡಹಬ್ಬ. ಇತ್ತೀಚಿನ ವರ್ಷಗಳಲ್ಲಿ ಜರುಗುತ್ತಿರುವ ಬಸವಸೇನೆಯ ಧಾರ್ಮಿಕ ಪ್ರವಚನ ಕಾರ್ಯಕ್ರಮಗಳು ಇನ್ನಿತರ ಸಂಘ ಸಂಸ್ಥೆಗಳ ಸಾಂಸ್ಕೃತಿಕ ಚಟುವಟಿಕೆಗಳು. ಸೋಮಶೇಖರ ಮಠದ ಪುಣ್ಯಾರಾಧನೆ ಕಾರ್ಯಕ್ರಮಗಳು ಇತ್ಯಾದಿಗಳು ಮುನವಳ್ಳಿ ಸಾಂಸ್ಕೃತಿಕ ಅಧ್ಯಯನಕ್ಕೆ ಆಕರಗಳಾಗಿವೆ.

ಪಂಚಲಿಂಗೇಶ್ವರ ದೇವಾಲಯವು ವಿವಿಧ 8 ದೇವಾಲಯಗಳನ್ನೊಳಗೊಂಡ ಸ್ಥಳ.ಪೌರಾಣಿಕ ಐತಿಹ್ಯದಂತೆ "ಅಗಸ್ತ್ಯ"ಮುನಿಗಳು ಮಲಪ್ರಭಾ ನದಿ ದಡದಲ್ಲಿ ತಪಗೈದು "ಅಂಧಕಾಸುರ"ನೆಂಬ ದೈತ್ಯನ ಸಂಹಾರ ಮಾಡಿ,ಪಂಚಭೂತ ತತ್ವಗಳಾದ "ಪೃಥ್ವಿ,ಅಪ್,ತೇಜ,ವಾಯು,ಅಗ್ನಿ,"ಪ್ರತಿ ತತ್ವಕ್ಕೂ ಆಧಾರವಾಗಿ ಐದು ಲಿಂಗಗಳನ್ನು ಪ್ರತಿಷ್ಠಾಪಿಸಿ "ಪಂಚಲಿಂಗೇಶ್ವರ"ನನ್ನು ಪೂಜಿಸಿದರೆಂಬ ಪುರಾಣ ಕಥೆಯನ್ನು ಹೊಂದಿದ ಈದೇಗುಲವು ಬನಶಂಕರಿ, ರೇಣುಕಾದೇವಿ, ತ್ರ್ಯಂಭಕೇಶ್ವರ, ಅಗ್ನಿದೇವಾಲಯ, ರುದ್ರಮುನೀಶ್ವರ, ತಾರಕೇಶ್ವರ, ಮಲ್ಲಿಕಾರ್ಜುನ ದೇವಾಲಯಗಳನ್ನು ಎರಡು ಪುಷ್ಕರಣಿಗಳನ್ನು ಹೊಂದಿದ ದೇಗುಲಗಳ ತಾಣ.

ಮುನವಳ್ಳಿಗೆ ಸಾಕಷ್ಟು ಸಾರಿಗೆ ಸೌಕರ್ಯವುಂಟು,ಬಸ್ ನಿಲ್ದಾಣದಿಂದ ಕಾಲ್ನಡಿಗೆಯಲ್ಲಿ ಬಂದರೂ ಸಾಕು ಈ ದೇವಾಲಯ ತಲುಪಬಹುದು. ದೇವಗಿರಿ ಯಾದವರ ಕಾಲದಲ್ಲಿ "ಶಿವಪುರ"ವಾಗಿ, ನಂತರ ತೊರಗಲ್ ನಾಡಿನ ಪ್ರಮುಖ ಕ್ಷೇತ್ರವಾಗಿ ಮರಾಠರ ಕಾಲಕ್ಕೆ ಶಿಂಧೆ ಮಹಾರಾಜರ ವಿಶ್ರಾಂತಿಧಾಮವಾಗಿ ಮುನವಳ್ಳಿ ಐತಿಹಾಸಿಕ ಚರಿತ್ರೆ ಹೊಂದಿದೆ.

**3.1 ಶ್ರೀ ಪಂಚಲಿಂಗೇಶ್ವರ ದೇವಾಲಯ**

ಬೆಳಗಾವಿ ಜಿಲ್ಲೆಯ ಸವದತ್ತಿ ತಾಲೂಕಿನ ಮುನವಳ್ಳಿ ತಾಲೂಕು ಕೇಂದ್ರದಿಂದ 16 ಕಿ.ಮೀ ಅಂತರದಲ್ಲಿರುವ ಗ್ರಾಮ.ಶ್ರೀ ರೇಣುಕಾ ಸಕ್ಕರೆ ಕಾರ್ಖಾನೆ,ಮಲಪ್ರಭಾ ನದಿ ದಡದಲ್ಲಿರುವ ಆಲೂರು ಮಠ,ವಿಠೋಬಾ ಮಂದಿರ, ವೆಂಕಟೇಶ್ವರ ದೇವಾಲಯ.ಗ್ರಾಮದ ಕೈವಲ್ಯಾಶ್ರಮ,ಸೋಮಶೇಖರ ಮಠ,ಇವುಗಳ ಜೊತೆಗೆ ಮುನವಳ್ಳಿ ಜನರ ಆರಾಧ್ಯ ದೈವ ಶ್ರೀ ಪಂಚಲಿಂಗೇಶ್ವರ ದೇವಾಲಯದಿಂದ ಪ್ರಸಿದ್ಧಿ ಹೊಂದಿದ ಐತಿಹಾಸಿಕ ಪ್ರವಾಸೀ ತಾಣ.

ಪಂಚಲಿಂಗೇಶ್ವರ ದೇವಾಲಯವು ವಿವಿಧ 8 ದೇವಾಲಯಗಳನ್ನೊಳಗೊಂಡ ಸ್ಥಳ.ಪೌರಾಣಿಕ ಐತಿಹ್ಯದಂತೆ "ಅಗಸ್ತ್ಯ"ಮುನಿಗಳು ಮಲಪ್ರಭಾ ನದಿ ದಡದಲ್ಲಿ ತಪಗೈದು "ಅಂಧಕಾಸುರ"ನೆಂಬ ದೈತ್ಯನ ಸಂಹಾರ ಮಾಡಿ,ಪಂಚಭೂತ ತತ್ವಗಳಾದ "ಪೃಥ್ವಿ, ಅಪ್, ತೇಜ, ವಾಯು, ಅಗ್ನಿ "ಪ್ರತಿ ತತ್ವಕ್ಕೂ ಆಧಾರವಾಗಿ ಐದು ಲಿಂಗಗಳನ್ನು ಪ್ರತಿಷ್ಠಾಪಿಸಿ "ಪಂಚಲಿಂಗೇಶ್ವರ"ನನ್ನು ಪೂಜಿಸಿದರೆಂಬ ಪುರಾಣ ಕಥೆಯನ್ನು ಹೊಂದಿದ ಈದೇಗುಲವು ಬನಶಂಕರಿ, ರೇಣುಕಾದೇವಿ, ತ್ರ್ಯಂಭಕೇಶ್ವರ, ಅಗ್ನಿದೇವಾಲಯ, ರುದ್ರಮುನೀಶ್ವರ, ತಾರಕೇಶ್ವರ, ಮಲ್ಲಿಕಾರ್ಜುನ ದೇವಾಲಯಗಳನ್ನು ಎರಡು ಪುಷ್ಕರಣಿಗಳನ್ನು ಹೊಂದಿದ ದೇಗುಲಗಳ ತಾಣ.

ಮುನವಳ್ಳಿಗೆ ಸಾಕಷ್ಟು ಸಾರಿಗೆ ಸೌಕರ್ಯವುಂಟು,ಬಸ್ ನಿಲ್ದಾಣದಿಂದ ಕಾಲ್ನಡಿಗೆಯಲ್ಲಿ ಬಂದರೂ ಸಾಕು ಈ ದೇವಾಲಯ ತಲುಪಬಹುದು. ದೇವಗಿರಿ ಯಾದವರ ಕಾಲದಲ್ಲಿ "ಶಿವಪುರ"ವಾಗಿ,ನಂತರ ತೊರಗಲ್ ನಾಡಿನ ಪ್ರಮುಖ ಕ್ಷೇತ್ರವಾಗಿ ಮರಾಠರ ಕಾಲಕ್ಕೆ ಶಿಂಧೆ ಮಹಾರಾಜರ ವಿಶ್ರಾಂತಿಧಾಮವಾಗಿ ಮುನವಳ್ಳಿ ಐತಿಹಾಸಿಕ ಚರಿತ್ರೆ ಹೊಂದಿದೆ.ಈ ದೇವಾಲಯದಲ್ಲಿರುವ ಶಾಸನದಲ್ಲಿ–

"ಭರತಾವನಿಗೊಪ್ಪಿದುದು, ಸುರುಚಿರ ಧರ್ಮದಂತೆ ಕುಂತಳಕಲೆ ವಿ,
ಸ್ತರಮೆನೆ ತೊರಗಲೆನಾಡಿನ, ಸಿರಿಕರುವೆನಿಸಿದುದು ಮುನಿಪುರಂ ಕಡುರಮ್ಯಂ"[10]

ಎಂದು ಮುನವಳ್ಳಿಯ ಪರಿಸರದ ವರ್ಣನೆಯಿದೆ.ಇಂಥ ಪುಣ್ಯ ಕ್ಷೇತ್ರದಲ್ಲಿ

"ಶ್ರೀ ವೇದವ್ಯಾಸ ಕುತ್ಸರ್ಜಮದಗುಣಿ ವಶಿಷ್ಟಭಾರದ್ವಾಜ,ಶ್ರೀ ವಿಶ್ವಾಮಿತ್ರರು ಸನಕ, ಸನಂದಾದಿ, ಜಮದಗ್ನಿ, ವಿಭಾಂಡಕ ಮುನಿಗಳು ಮಲಪ್ರಭಾ ನದಿ ತಟದಲ್ಲಿ ತಮ್ಮ ತಪೋಶಕ್ತಿಯನ್ನು ಪಸರಿಸಿಕೊಂಡಿರುವುದನ್ನು ತಿಳಿಸಲಾಗಿದೆ.

ಸದಾ ಹಸಿರಿನಿಂದ ಮೈದುಂಬಿದ ಪ್ರಕೃತಿ ಸಂಪತ್ತನ್ನೂ ಕೂಡ ಈ ತಾಣ ಹೊಂದಿತ್ತು ಎಂಬುದನ್ನು

"ತೆಂಗು ಕೊಂಗು ಜಂಬೂರಸ,ಮಾಧುಪಲಂ ಪನಸಾಂಬ್ರ ನಿಂಬಿ ನಾ,
ರಂಗ ಸುರಹೊನ್ನೆ ಸುಪಾ ಟಳಿ ಪಾರಿಜಾತ,
ಪುಂನಾಗವಶೋಕೆ ಕತ್ತಲಿಸುತಿಪ್ಪೆಲೆವಳ್ಳಿಗಳಿಂ ಮದಾಳಿಯಿಂ.
ಶ್ರೀಗಿದು ಜನ್ಮಭೂಮಿಯೆನಿಕುಂ ಮುನಿವಳ್ಳಿ ಸದಾವ ಕಾಲಮಂ"

ಎಂದೆಲ್ಲ ಸಂಪತ್ಸಮೃದ್ದಿ ಕೊಡುವ ಸುಂದರ ತಾಣವಾದ ಮುನವಳ್ಳಿ ಕ್ರಿ.ಶ.12ನೇ ಶತಮಾನದಲ್ಲಿ ಈ ಬಾಗವನ್ನು ಆಳಿದ ದೇವಗಿರಿ ಯಾದವ ದೊರೆಗಳು ಯಾದವ ಚಕ್ರವರ್ತಿ ಸಿಂಘಣದೇವ,ಶ್ರೀ ಪಂಚಲಿಂಗೇಶ್ವರ ದೇವಾಲಯವನ್ನು ಜೀರ್ಣೋದ್ದಾರ ಮಾಡಿದ ಬಗ್ಗೆ ಈ ಶಾಸನದಲ್ಲಿ ವಿವರಣೆಯಿದೆ.

"ಧರ್ಮ ಪ್ರಸಂಗದಿಂದ,
ಪೆರ್ಮ್ಮಗೆಮೇರು ಸಿಂಘಣೋರ್ವಿಪಂ ಶಿವಪು,
ರಮಂ ನಿರ್ಮ್ಮಿಪುದೆನೆ ಪುರುಷೋ,
ತ್ತಮ ಧರ್ಮೋದ್ಯೋಗ ಮನೆ,
ಜೋಗಿದೇವಗಿತ್ತಂ,

ಪುಣ್ಯದ ತಾಣವಾಗಿದ್ದ ಮುನವಳ್ಳಿಯನ್ನು "ಶಿವಪುರ"ವಾಗಿ ಮಾರ್ಪಡಿಸಬೇಕೆಂದು ಇಚ್ಚಿಸಿ ತನ್ನ ಸರ್ವಾಧಿಕಾರಿ ಪುರ್ರುಷೋತ್ತಮನಿಗೆ ಅಣತಿಯನ್ನಿತ್ತಾಗ ಅದಕ್ಕೆ ತಲೆಬಾಗಿದ ಆತ ತನ್ನ ಸಹೋದರ "ಜೋಗದೇವ"ನಿಗೆ ಈ ಧರ್ಮ ಕಾರ್ಯ ಕೈಗೊಳ್ಳಲು ತಿಳಿಸಿದ.

ಆ ಜೋಗದೇವ ಸಿಂಘರೂಪಿ ಅಧಿಕಾರಿ,ಹಲವು ದೇಶಾಧಿಕಾರ ಕೈಗೊಂಡ ವ್ಯಕ್ತಿ ಪುರುಷೋತ್ತಮ,ಶಕವರ್ಷ 1145 ನೆಯ ಚಿತ್ರಭಾನು ಸಂವತ್ಸರದ ಕಾರ್ತಿಕ ಶುದ್ದ ಪುಣ್ಯಮಿ ಸೋಮವಾರ ಸೋಮಗ್ರಹಣ ವ್ಯತಿಪಾತದಲ್ಲಿ ಸ್ವಯಂಭೂ ಪಂಚಲಿಂಗೇಶ್ವರನಿಗೆ ಮಾಟಕೂಟ ಪ್ರಸಾದ ಖಂಡಸ್ಪುಟಿತ ಜೀರ್ಣೊದ್ದಾರ,ನೈವೇದ್ಯ ಅಂಗಾಂಗ ಭೋಗ ಛತ್ರಕ್ಕೆ ಪುರುಷೋತ್ತಮ

---

10. ಡಾ. ಕೆ. ಎಸ್. ಪಾಟೀಲ, "ಬೆಳಗಾವಿ ಜಿಲ್ಲೆಯ ಇತಿಹಾಸ ಮತ್ತು ಪುರಾತತ್ವ" ಸವದತ್ತಿ ತಾಲೂಕಿನ ಶಾಸನಗಳು, ಪುಟ – 126

ದಣ್ಣಾಯಕರ ನಿಯಮದಂತೆ ನೆರವೇರಿಸುವದರ ಮೂಲಕ ವಿವಿಧ ವೃತ್ತಿಯವರಿಗೆ ದತ್ತಿ ಬಿಟ್ಟು ಕೊಟ್ಟನು,

ಪುರುಷೋತ್ತಮನ ಅನುಜ ಜೋಗದೇವ ಅತ್ಯಂತ ಭಕ್ತಿಯಿಂದ ಪಂಚಲಿಂಗೇಶ್ವರ ನೆಲೆನಿಂತ ಪುಣ್ಯದ ತಾಣ ಮುನವಳ್ಳಿಯನ್ನು ಶಿವಪುರವಾಗಿಸಲು 16 ಶಿವಪುರ ವಿಪ್ರರಿಗೆ ದತ್ತಿ ಕೊಟ್ಟಿರುವನು.ಪ್ರತಿ ವಿಪ್ರರಿಗೆ ಪ್ರತ್ಯೇಕ ತಮ್ಮ 200 ರಂತೆ ಹಳೆಯ ಊರಿನ ಹದ್ದಿನಿಂದ ಸಿಂದವಿಗೆಯಲ್ಲಿ ನೂರು,ನಾಗಪುರದಲ್ಲಿ ಹದಿನಾರು,ವ್ಯಾಪ್ತಿಯನ್ನು ದ್ವಿಜರಿಗೆ ಬಿಟ್ಟುಕೊಡುವ ಮೂಲಕ ಮುನಿಪುರದ ತೋಟಿಗರು ವರ್ಷಂಪ್ರತಿ ಎಲೆಗಳು,ಗಾಣದ ಎಣ್ಣೆ,ಹೂವುಗಳು ಪ್ರತಿಯೊಂದು ದಾನ್ಯಗಳನ್ನು ಪೂಜಾ ಕಾರ್ಯ ಸಾಂಗವಾಗಿ ಸಾಗಲು ವಹಿಸಿಕೊಟ್ಟಿರುವ ಬಗ್ಗೆ ಶಾಸನದಲ್ಲಿ ವಿವರಣೆಯಿದೆ.[11]

ಇಂಥ ದೇವಾಲಯ ವರ್ಷವರ್ಷವೂ ಭಕ್ತ ಜನರಿಂದ ಪ್ರಸಿದ್ದ ಪುಣ್ಯ ಕ್ಷೇತ್ರವಾಗಿ ನೆಲೆನಿಂತಿದ್ದು,ದೇವಾಲಯಕ್ಕೆ ಸದ್ಯ "ಶ್ರೀ ಪಂಚಲಿಂಗೇಶ್ವರ ನಿತ್ಯ ರುದ್ರಾಭಿಷೇಕ ಹಾಗೂ ಜೀರ್ಣೋದ್ದಾರ ಸಮೀತಿ ಮುನವಳ್ಳಿ"ಎಂದು ಸಮೀತಿ(ಟ್ರಸ್ಟ) ಅಸ್ತಿತ್ವದಲ್ಲಿದ್ದು ದೇವಾಲಯಕ್ಕೆ ಸಂಬಂಧಿಸಿದ ಕಾರ್ಯಗಳ ಉಸ್ತುವಾರಿ ನೋಡಿಕೊಳ್ಳುತ್ತಿರುವುದು.

ದೇವಾಲಯದ ಆವರಣದಲ್ಲಿ ಕಲ್ಯಾಣ ಮಂಟಪಗಳಿದ್ದು ವಿವಾಹ,ಇತರೆ ಕಾರ್ಯಕ್ರಮಗಳಿಗಾಗಿ ನೀಡಲಾಗುತ್ತಿದ್ದು,ಕಾರ್ತಿಕ ಮಾಸದಲ್ಲಿ ಇಲ್ಲಿ ವಿಜೃಂಭಣೆಯಿಂದ ಕಾರ್ತಿಕೋತ್ಸವ ಜರುಗುತ್ತಿದ್ದು,ಪ್ರತಿ ನಿತ್ಯವೂ ಬೆಳಗಿನ ಸಮಯ ರುದ್ರಾಭಿಷೇಕ ಜರುಗಿಸುವ ಜೊತೆಗೆ ತುಪ್ಪದ ದೀವಿಗೆ ಬೆಳಗುವ ಸಂಪ್ರದಾಯವಿದ್ದು ಭಕ್ತ ಜನರ ಕೋರಿಕೆ ಮೇರೆಗೆ ಕ್ಷೀರಾಭಿಷೇಕ,ಕುಂಕುಮಾರ್ಚನೆ,ವಿವಿಧ ಪೂಜೆಗಳನ್ನು ಇಲ್ಲಿನ ಅರ್ಚಕರು ನೆರವೇರಿಸುವರು.

ಈ ದೇವಾಲಯ ಆವರಣದಲ್ಲಿರುವ ತ್ರ್ಯಂಭಕೇಶ್ವರ ದೇವಾಲಯ ಕೂಡ ಜ್ಯೋತಿರ್ಲಿಂಗ ಸ್ವರೂಪದ್ದು,ಈ ದೇವಾಲಯದಲ್ಲಿ ಮೂರು ಲಿಂಗಗಳು ಇದ್ದು ಪ್ರತಿ ಲಿಂಗ ಹೊಂದಿರುವ ಗರ್ಭಗೃಹ ವಿನ್ಯಾಸ ಕೂಡ ಮಹತ್ವದ್ದು.ಸೂರ್ಯೋದಯದಿಂದ ಸೂರ್ಯಾಸ್ತದವರೆಗೂ ಈ ದೇಗುಲದ ಲಿಂಗಗಳ ಮೇಲೆ ಸೂರ್ಯ ಕಿರಣಗಳ ಬೆಳಕು ಕಾಣುವಂತೆ ವಿನ್ಯಾಸದೊಂದಿಗೆ ಈ ದೇವಾಲಯ ನಿರ್ಮಿಸಿದ್ದು ಅಂದಿನ ವಾಸ್ತುಶಿಲ್ಪಕಲೆಗೆ ಹಿಡಿದ ಕೈಗನ್ನಡಿ.

ಈ ದೇವಾಲಯದಲ್ಲಿರುವ ಮಲ್ಲಿಕಾರ್ಜುನ ದೇವಾಲಯದಲ್ಲಿನ ಪಾರ್ವತಿಯ ಶಿಲ್ಪವು ಸುಖಾಸೀನದಲ್ಲಿದ್ದು ತನ್ನ ಎಡಗಾಲನ್ನು ಮಡಚಿದ್ದು ಬಲಗಾಲನ್ನು ಕೆಳಗೆ ಇಳಿಬಿಟ್ಟಿದ್ದಾಳೆ.ನಾಲ್ಕು ಕೈಗಳನ್ನು ಹೊಂದಿದ ಇವಳು ಮೇಲಿನ ಬಲಗೈಯಲ್ಲಿ ತ್ರಿಶೂಲ. ಕೆಳಗಿನ ಬಲಗೈ ಅಭಯ ಮುದ್ರೆಯಲ್ಲಿದೆ. ಮೇಲಿನ ಎಡಗೈಯಲ್ಲಿ ಡಮರು ಮತ್ತು ಕೆಳಗಿನ ಎಡಗೈಯಲ್ಲಿ ಬೀಜಪುರವಿದೆ.

ಪಂಚಲಿಂಗೇಶ್ವರ ದೇವಾಲಯದಲ್ಲಿ ಕೋಷ್ಠಗೂಡುವಿನಲ್ಲಿರುವ ಮಹಿಷಮರ್ಧಿನಿಯ ಶಿಲ್ಪವು ಎಂಟು ಕೈಗಳನ್ನು ಹೊಂದಿದ್ದು ಬಲಗೈಯಲ್ಲಿ ಕ್ರಮವಾಗಿ ಖಡ್ಗ, ಚಕ್ರ, ತ್ರಿಶೂಲ, ಗುರಾಣಿ ಹಿಡಿದಿದ್ದು

11. ಮಹಾಂತೇಶ ಎಂ. ಅಕ್ಕಿ, "ಬೆಳಗಾವಿ ಜಿಲ್ಲೆಯ ಶಾಕ್ತ ಶಿಲ್ಪಗಳು", (ಬೆಳಗಾವಿ ಜಿಲ್ಲೆಯ ಇತಿಹಾಸ ಮತ್ತು ಪುರಾತತ್ವ ಸಂಪಾದಕರು ಆರ್. ಗೋಪಾಲ್) ಪುಟ – 232

ಎಡಗೈಗಳಲ್ಲಿ ಕ್ರಮವಾಗಿ ಶಂಖ, ಬಿಲ್ಲು, ಗುರಾಣಿ, ಮತ್ತೊಂದು ಕೈಯಿಂದ ಮಹಿಷನ ತಲೆಯನ್ನು ಒತ್ತಿ ಹಿಡಿದಿದ್ದಾಳೆ. ತನ್ನ ಎಡಗಾಲನ್ನು ಕೋಣದ ಮೇಲಿಟ್ಟಿದ್ದು ಬಲಗಾಲನ್ನು ಪೀಠದ ಮೇಲೆ ಇಟ್ಟಿದ್ದಾಳೆ. ಇವಳ ಎಡಗಾಲನ್ನು ಹೊತ್ತಿರುವ ಕೋಣವು ತನ್ನ ಮುಂಗಾಲುಗಳನ್ನು ಮಡಿಚಿದ್ದು ಹಿಂದಿನ ಕಾಲುಗಳನ್ನು ಎತ್ತರಿಸಿದೆ. ಇದರಿಂದ ಕೋಣವು ಮುಗ್ಗುರಿಸಿದ ಸ್ಥಿತಿಯಲ್ಲಿ ಕಂಡು ಬರುತ್ತದೆ.

"ಸುಪ್ರಭೇದಾಗಮ"ದ ಪ್ರಕಾರ ಏಳು ಸಪ್ತ ಮಾತೃಕೆಯರನ್ನು ಬ್ರಹ್ಮನು ನಿರ್ರಿತನನ್ನು ಕೊಲ್ಲಲು ಸೃಷ್ಟಿಸಿದ. ಇವರು ಬ್ರಹ್ಮ. ಶಿವ. ವಿಷ್ಣು.ವರಾಹ.ಯಮ.ಕಾರ್ತಿಕೇಯ ಹಾಗೂ ಇಂದ್ರ ದೇವತೆಗಳ ಹೆಂಡಂದಿರು. ಈ ಏಳು ಸಪ್ತಮಾತೃಕೆಯರನ್ನು ಮಾತೃದೇವಿಯರೆಂದೂ ಕರೆಯಲಾಗುತ್ತದೆ. ಇಂಥ ಮೂರ್ತಿ ಶಿಲ್ಪವು ಪಂಚಲಿಂಗೇಶ್ವರ ದೇವಾಲಯದಲ್ಲಿದೆ. ಹೀಗೆ ಅನೇಕ ಶಾಕ್ತ ಶಿಲ್ಪಗಳನ್ನು ಹೊಂದಿದ ಈ ದೇವಾಲಯ ತನ್ನದೇ ಆದ ವೈಶಿಷ್ಟ್ಯದಿಂದ ಕೂಡಿದೆ.

### 3.2 ಕೈವಲ್ಯಾಶ್ರಮ ಸ್ವಾಮಿ ಸಂಸ್ಥೆ

ಮುನವಳ್ಳಿ ಬಸ್ ನಿಲ್ದಾಣದಿಂದ ಪಂಚಲಿಂಗೇಶ್ವರ ದೇವಾಲಯಕ್ಕೆ ಹೋಗುವ ಮಾರ್ಗದಲ್ಲಿ ಮೊದಲಿಗೆ ಕಂಡು ಬರುವುದು ಕೈವಲ್ಯಾಶ್ರಮ ಸ್ವಾಮಿ ಸಂಸ್ಥೆ. ಇದು ಕೂಡ ಬ್ರಾಹ್ಮಣ ಸಂಪ್ರದಾಯದ ಹಾಗೂ ಶ್ರೀ ಕೈವಲ್ಯಾಶ್ರಮ ಸ್ವಾಮಿ ಸಂಸ್ಥೆಯ ಮೂಲಕ ತನ್ನದೇ ಆದ ಖ್ಯಾತಿಯನ್ನು ಹೊಂದಿದ ಸ್ಥಳ.ಈ ಸಂಸ್ಥೆಯು ಸ್ಥಾಪನೆಯಾಗಿದ್ದು 1940 ರ ದಶಕದಲ್ಲಿ ಇಂಥ ಸಂಸ್ಥೆಯು ಚಿದಂಬರ ಮಹಾರಾಜರ ಕನಸಿನ ಕೂಸಾಗಿತ್ತು ಅವರು ಮುರಗೋಡ ಕೆಂಗೇರಿಗೆ ಬಂದು ಗುರ್ಲಹೊಸೂರಿಗೆ ತೆರಳುವ ಅನೇಕ ಸಂದರ್ಭಗಳಲ್ಲಿ ತಗ್ಗಿದ್ದುಂಟು. ಇಂಥ ಸಂಸ್ಥೆಯು ಉತ್ಕರ್ಷಾತಿಶಯವನ್ನು ಹೊಂದುತ್ತ ಗುರ್ಲಹೊಸೂರಲ್ಲಿ ಕಾರ್ಯನಿರತವಾಗಿರುವಾಗಲೇ ಇನ್ನೊಂದು ಪ್ರಸಂಗ ಎದುರಾಯಿತು. ಅದುವೇ ಮಲಪ್ರಭಾ ನದಿಯ ಆಣೆಕಟ್ಟೆಯ ಹಿನ್ನೀರಿನಲ್ಲಿ ಗುರ್ಲಹೊಸೂರ ಊರು ಮುಳುಗುತ್ತಿರುವ ಪ್ರಸಂಗ. ಇಸ್ವಿ ಸನ್ 1960ರ ದಶಕದಲ್ಲಿ ಈ ಪ್ರಸಂಗ ಎದುರಾಯಿತು. ಸರಕಾರದಿಂದ ಬೇರೆ ಕಡೆಗೆ ಭೂಮಿ ಮಂಜೂರು ಮಾಡಿಕೊಡುವ ಹಾಗೂ ಮಹಾರಾಜರ ಸಮಾಧಿ ಮಂದಿರದ ಪುನರ್ನಿರ್ಮಾಣದ ಭರವಸೆ ಸಿಕ್ಕಿತು. ಆದರೆ ಸಮಾಧಿ ಮಂದಿರವನ್ನು ಎಲ್ಲಿಗೆ ಸ್ಥಳಾಂತರಿಸುವದು ಎಂಬ ಪ್ರಶ್ನೆ ಎದುರಾಯಿತು.

ಸವದತ್ತಿಯ ಹೊರವಲಯದಲ್ಲ ಗುರ್ಲಹೊಸೂರ ಊರನ್ನು ಸ್ಥಳಾಂತರಿಸುವ ಕಾರ್ಯ ಆರಂಭಗೊಂಡಿತು. ಗುರ್ಲಹೊಸೂರಲ್ಲಿಯ ಶ್ರೀ ಚಿದಂಬರ ದೇವಸ್ಥಾನವೂ ಅಲ್ಲಿಗೆ ಸ್ಥಳಾಂತರಗೊಳ್ಳುವುದಕ್ಕಾಗಿ ದೇವಸ್ಥಾನದ ಪುನರ್ನಿರ್ಮಾಣದ ಕಾರ್ಯ ಆರಂಭವಾಯಿತು. ಈಗ ಮಹಾರಾಜರ ಸಮಾಧಿಯನ್ನು ಹೊಸದಾಗಿ ಸ್ಥಳಾಂತರಗೊಳ್ಳುವ ಗುರ್ಲಹೊಸೂರಿನಲ್ಲಿಯೇ ಮಾಡುವದೋ ಅಥವಾ ಬೇರೆ ಎಲ್ಲಿಯಾದರೂ ಮಾಡುವದೊ ಎಂಬ ಪ್ರಶ್ನೆ ಎದುರಾಯಿತು. ಬೆಳಗಾವಿ, ಧಾರವಾಡ, ರಾಮದುರ್ಗ, ಮುನವಳ್ಳಿ, ಗೋಕಾಕ ಮುಂತಾದ ಊರುಗಳಲ್ಲಿಯ ಮಹಾರಾಜರ ಭಕ್ತಮಂಡಲಿಯು ಮಹಾರಾಜರ ಸಮಾಧಿಯನ್ನು ತಮ್ಮ ಊರಿಗೆ ಸ್ಥಳಾಂತರಿಸಬೇಕೆಂದು ಬೇಡಿಕೆಯನ್ನು ಮುಂದಿಟ್ಟರು.

ಈ ಬಗ್ಗೆ ಸಾಕಷ್ಟು ಚರ್ಚಿಸಲಾಯಿತು. ಈ ಬಗ್ಗೆ ಮಹಾರಾಜರ ವಿಚಾರ ಏನು ಇರುವದು ಎನ್ನುವದು ತಿಳಿದುಕೊಳ್ಳಲು ಮಹಾರಾಜರ ಮುಂದೆ ಚೀಟಿ ಹಾಕಬೇಕೆಂದು ನಿರ್ಣಯಿಸಲಾಯಿತು. ಇಂಥ ಪ್ರಸಂಗಗಳಲ್ಲಿ ಸ್ವತಃ ಮಹಾರಾಜರು ಸಹಿತ ದೇವರ ಮುಂದೆ ಚೀಟಿ ಹಾಕಿ ನಿರ್ಣಯ ತೆಗೆದುಕೊಳ್ಳುತ್ತಿದ್ದುದು ಅವರ ಚರಿತ್ರೆಯಿಂದ ಕಂಡುಬರುತ್ತದೆ. ಈ ರೀತಿ ಚೀಟಿ ಹಾಕಿದಾಗ ಮುನವಳ್ಳಿ ಊರಿನ ಹೆಸರು ಬಂದಿತು. ಆದರೂ ಬೇರೆ ಬೇರೆ ಭಾಗದ ಭಕ್ತರು ತಮ್ಮ ಊರಿನ ಬಗ್ಗೆ ಒತ್ತಾಯ ಮಾಡತೊಡಗಿದರು. ಪುನಃ ಚೀಟಿ ಹಾಕಿದಾಗ ಎರಡನೆಯ ಸಲವೂ ಮುನವಳ್ಳಿ ಊರಿನ ಹೆಸರು ಬಂದಿತು. ಈ ರೀತಿ ಮೂರು ಸಲ ಚೀಟಿ ಹಾಕಿದರು ಮೂರು ಸಲ ಮುನವಳ್ಳಿ ಹೆಸರು ಬಂದಿತು. ಹೀಗಾಗಿ ಮಹಾರಾಜರ ಸಮಾಧಿ ಸ್ಥಳವನ್ನು ಮುನವಳ್ಳಿಗೆ ಸ್ಥಳಾಂತರ ಮಾಡುವ ನಿರ್ಣಯ ತೆಗೆದುಕೊಳ್ಳಲಾಯಿತು.

ಮುನವಳ್ಳಿಯ ಗ್ರಾಮಪಂಚಾಯತಿಯಿಂದ 4 ಎಕರೇ ಜಮೀನನ್ನು ಊರ ಹೊರವಲಯದ ಶ್ರೀ ಪಂಚಲಿಂಗೇಶ್ವರ ದೇವಸ್ಥಾನದ ಬಳಿ ಖರೀದಿಸಲಾಯಿತು. ಶ್ರೀ ಪಂಚಲಿಂಗೇಶ್ವರ ದೇವಸ್ಥಾನದ ಪಕ್ಕದಲ್ಲಿ ಮಲಪ್ರಭಾ ನದಿ ಹರಿಯುತ್ತದೆ. ಬಹುಶಃ ಮಹಾರಾಜರ ಮನಸ್ಸಿನಲ್ಲಿ ಮಲಪ್ರಭಾ ತೀರವನ್ನು ಬಿಟ್ಟು ಹೋಗಬಾರದೆಂದು ಇದ್ದಿರಬೇಕು. ಮುನವಳ್ಳಿಯು ಅನೇಕ ಸತ್ಪುರುಷರು ತಪಸ್ಸು ಮಾಡಿರುವ ಸ್ಥಳ. ಶ್ರೀ ಚಿದಂಬರ ಮಹಾಸ್ವಾಮಿಗಳ ತಂದೆ ಶ್ರೀ ಮಾರ್ತಾಂಡ ಸೋಮಯಾಜಿಗಳು ಕೆಲಕಾಲ ಇಲ್ಲಿ ವಾಸವಾಗಿದ್ದು ಸೋಮಯಾಗ ಮಾಡಿದ ಸ್ಥಳ. ಇಂತಹ ಪವಿತ್ರ ಕ್ಷೇತ್ರವನ್ನೇ ಮಹಾರಾಜರು ಆರಿಸಿಕೊಂಡರು.

ಮುನವಳ್ಳಿಯಲ್ಲಿ ಖರೀದಿಸಿದ ಸ್ಥಳ ಪೂರ್ಣ ಕಲ್ಲುಗುಡ್ಡ ಆಗಿತ್ತು. ಇಂತಹ ಗುಡ್ಡದಲ್ಲಿ ಅದು ಹೇಗೆ ಮಂದಿರ ನಿರ್ಮಾಣವಾಗುವದೋ ಎಂದು ಅನೇಕರ ಮನಸ್ಸಿನಲ್ಲಿ ಸಂಶಯ ಮೂಡಿದ್ದಂತು ನಿಜ. ಆದರೆ ಮಹಾರಾಜರ ಭಕ್ತ ಮಂಡಳಿಯ ಗುರುಭಕ್ತಿ, ನಿಷ್ಠೆ, ಕೆಚ್ಚು ಸಾಮಾನ್ಯವಾದದ್ದಲ್ಲ. ಆ ಕಲ್ಲು ಗುಡ್ಡದಲ್ಲಿಯೇ ಸುಂದರವಾದ ಸಮಾಧಿ ಮಂದಿರ, ಸುತ್ತಲೂ ಪೌಳಿ, ಸಭಾ ಮಂಟಪ ಭಾವಿ ಇತ್ಯಾದಿ ಕೆಲವೇ ಸಮಯದಲ್ಲಿ ನಿರ್ಮಾಣಗೊಂಡವು. ಇತ್ತೀಚಿಗೆ ದೊಡ್ಡದಾದ ಅನ್ನ ಛತ್ರ ಕಟ್ಟಡ ನಿರ್ಮಾಣಗೊಂಡಿದೆ. ಯಾವುದೇ ಧಾರ್ಮಿಕ ಕಾರ್ಯ ಮಾಡಲು ಎಲ್ಲ ಸೌಕರ್ಯಗಳ ಏರ್ಪಾಟು ಆಗಿದೆ. ಈ ರೀತಿ ಎಲ್ಲ ಭಕ್ತಜನರನ್ನು ಅನುಗ್ರಹಿಸುತ್ತಾ ಶ್ರೀ ಕೈವಲ್ಯಾಶ್ರಮ ಸ್ವಾಮಿಗಳು ಮುನವಳ್ಳಿಯಲ್ಲಿ ನೆಲೆನಿಂತಿರುವರು.ಅಷ್ಟೇ ಅಲ್ಲ ಇಲ್ಲಿನ ಕಲ್ಯಾಣಮಂಟಪಗಳಲ್ಲಿ ಎಲ್ಲ ಜಾತಿ ವರ್ಗದವರ ವಿವಾಹ,ಸೀಮಂತ,ಇತರೆ ಧಾರ್ಮಿಕ ಕಾರ್ಯಗಳು ಜರುಗುತ್ತಿದ್ದು ಪ್ರತಿವರ್ಷ ಚದಂಬರ ಪಾರಾಯಣವೂ ಪ್ರತಿ ದಿನ ಸಂಜೆ ಕೂಡ ಧಾರ್ಮಿಕ ಕಾರ್ಯಗಳು ಗ್ರಂಥಾಲಯ ಕೂಡ ಇಲ್ಲಿದ್ದು ಸ್ವಾಮೀಜಿಯವರು ಸಮಾಜದ ಜನರ ಕಲ್ಯಾಣದ ಕಾರ್ಯಗಳನ್ನು ಸಾಂಗವಾಗಿ ನೆರವೇರಿಸಿಕೊಂಡು ಬರುತ್ತಿರುವರು.

ಪ್ರತಿ ವರ್ಷವೂ ಕೃವಲ್ಯಾಶ್ರಮ ಸ್ವಾಮಿಗಳ ಪುಣ್ಯತಿಥಿಯನ್ನು ಅಶ್ವೀನ ಶುದ್ಧ ನವಮಿಯನ್ನು ಆಚರಿಸಿಕೊಂಡು ಬರುತ್ತಿರುವ ಇಲ್ಲಿ ಪ್ರತಿ ನಿತ್ಯವೂ ಕಾಕಡಾರತಿ, ನಾಮಸ್ಮರಣೆ, ಭಜನೆ, ಪಾಲಕಿ ಸೇವೆ.ಹಾಗೂ ವಿವಿಧ ಕಲಾಕಾರರಿಂದ ಸಂಗೀತ ಸೇವೆ ಜರುಗುತ್ತಿದ್ದು. ಹುಸೇನ್ ಸಾಬ್ ಚೋಪದಾರ

ಇವರು ಪ್ರತಿ ನಿತ್ಯ ಸಂಜೆ 6 ರಿಂದ 7.30 ರ ಅವಧಿಯಲ್ಲಿ ಸತ್ಸಂಗ ಕಾರ್ಯಕ್ರಮವನ್ನು ಕಳೆದ 1994 ರಿಂದ ಕೈವಲ್ಯಾಶ್ರಮ ಸತ್ಸಂಗ ಬಳಗದ ಮೂಲಕ ನಡೆಸಿಕೊಂಡು ಬರುತ್ತಿದ್ದು ಈ ಸಮಯದಲ್ಲಿ ಮಹಾಭಾರತ.ವೇದ.ಭಗವದ್ಗೀತೆ.ಶಿವಪುರಾಣ.ಭಾಗವತ.ಸಮರ್ಥ ರಾಮದಾಸರ ದಾಸಬೋಧೆಯ ಕುರಿತು ಸತ್ಸಂಗ ಕಾರ್ಯಕ್ರಮ ಹಮ್ಮಿಕೊಂಡು ಭಕ್ತ ಜನರಿಗೆ ಧಾರ್ಮಿಕ ಸಿಂಚನವನ್ನು ನೀಡುತ್ತ ತಮ್ಮ ಭಕ್ತಿಭಾವವನ್ನು ಸಮರ್ಪಿಸುತ್ತಿರುವುದು ಶ್ಲಾಘನೀಯವಾಗಿದೆ.83 ವಯಸ್ಸಿನ ಶ್ರೀಪಾದ ಶಿವರಾಮ ಮಹಾಜನ ಗುರುಗಳ ಹಾಗೂ ಸಂಸ್ಥೆಯ ವಿಶ್ವಸ್ಥ ಮಂಡಳಿಯ ಸದಸ್ಯರ ಮೂಲಕ ಅನೇಕ ಕಾರ್ಯಕ್ರಮಗಳು ಇಲ್ಲಿ ಜರುಗುತ್ತಿವೆ.[12]

### 3.3 ವೀರಭದ್ರೇಶ್ವರ ದೇವಾಲಯ ಮುನವಳ್ಳಿ

ಮುನವಳ್ಳಿ ಗ್ರಾಮದ ಮುಖ್ಯ ಅಗಸಿ ಬಾಗಿಲಿನಿಂದ ಊರ ಒಳಗಡೆ ಪೇಟೆ ರಸ್ತೆಯಲ್ಲಿ ವೀರಭದ್ರೇಶ್ವರ ದೇವಾಲಯವಿದೆ. ಇದು ಐತಿಹಾಸಿಕವಾಗಿದ್ದು ಮುಂಚೆ ಇದು"ಕಲ್ಮೇಶ್ವರ" ದೇವಾಲಯವಾಗಿದ್ದು ಶಿಥಿಲಾವಸ್ಥೆಯಲ್ಲಿತ್ತು. ರಾಮದುರ್ಗ ತಾಲೂಕಿನ ಪ್ರಸಿದ್ಧ ಗೊಡಚಿ ವೀರಭದ್ರೇಶ್ವರ ದೇವಾಲಯದವರು "ವೀರಭದ್ರೇಶ್ವರ ದೇವರ" ಮೂರ್ತಿ ಪ್ರತಿಷ್ಠಾಪಿಸಲೆಂದು ಮಲಪ್ರಭಾ ದಡದ ಮಾರ್ಗವಾಗಿ ಮೂರ್ತಿಯೊಂದಿಗೆ ಭಕ್ತ ಸಮೂಹ ಗೊಡಚಿಗೆ ಹೊರಟಾಗ ಕತ್ತಲಾದ್ದರಿಂದ ಇಲ್ಲಿನ ಕಲ್ಮೇಶ್ವರ ದೇವಾಲಯದಲ್ಲಿ ಉಳಿದುಕೊಳ್ಳಬೇಕಾಗಿ ಬಂದಿತು.

ತಮ್ಮೊಡನೆ ತಂದಿದ್ದ ಮೂರ್ತಿಯನ್ನು ಒಂದೆಡೆ ಇರಿಸಿ ಆ ರಾತ್ರಿ ಕಳೆದು ಮರುದಿನ ಹೊರಡಲನುವಾದಾಗ ರಾತ್ರಿ ಇರಿಸಿದ್ದ ಸ್ಥಳದಿಂದ ಮೂರ್ತಿ ಕದಲಿಲ್ಲವಂತೆ. ಎಲ್ಲರಿಗೂ ಆಶ್ಚರ್ಯ. ಆಗ ಅವರಲ್ಲಿದ್ದ ಹಿರಿಯರೊಬ್ಬರು. ತಾವು ಯಾವ ಸ್ಥಳದಿಂದ ಈ ಮೂರ್ತಿ ಹೊತ್ತೊಯ್ಯುತ್ತಿದ್ದೆವೋ ನಂತರ ತಲುಪಬೇಕಾದ ಸ್ಥಳಕ್ಕೆ ಹಗಲು-ರಾತ್ರಿ ಎನ್ನದೆ ಪಯಣ ಬೆಳೆಸಬೇಕಾಗಿತ್ತು. ಹಾಗೆ ಮಾಡದೆ ಇಲ್ಲಿ ಉಳಿದುಕೊಂಡಿದ್ದರಿಂದ ಆ ಮೂರ್ತಿ ಇಟ್ಟ ಸ್ಥಳದಿಂದ ಕದಲುತ್ತಿಲ್ಲ ಇದನ್ನು ಇಲ್ಲಿಯೇ ಪ್ರತಿಷ್ಠಾಪಿಸಿ.ಮತ್ತೊಂದು ಮೂರ್ತಿ ಮಾಡಲು ಶಿಲ್ಪಿಗೆ ಹೇಳೋಣ ಅದನ್ನು ಗೊಡಚಿಯಲ್ಲಿ ಪ್ರತಿಷ್ಠಾಪಿಸಿದರಾಯಿತು ಎಂದು ತಿಳಿಸಲು ನಿರ್ಮಿಸಿದ ದೇಗುಲವೇ "ವಸತಿ ವೀರಭದ್ರ" ಎಂದಾಗಿ "ವೀರಭದ್ರ ದೇವಾಲಯ" ಮುನವಳ್ಳಿಯಲ್ಲಿ ನಿರ್ಮಾಣಗೊಂಡಿತು ಎಂದು ದೇವಾಲಯದ ಅರ್ಚಕರು ತಿಳಿಸುತ್ತಾರೆ.

ಕಲ್ಮೇಶ್ವರ ದೇಗುಲದ ಭಗ್ನಾವಶೇಷಗಳು ಕೂಡ ಇಂದಿಗೂ ಉಳಿದಿವೆ.ದೇವಾಲಯದ ಬಲಭಾಗ ಈಶ್ವರಲಿಂಗ, ಎಡಭಾಗದಲ್ಲಿ ಬ್ರಹ್ಮದೇವರು(ಭರಮಪ್ಪ) ಶಿಲ್ಪಗಳಿದ್ದು ಇಲ್ಲಿನ "ವೀರಭದ್ರ" ಮೂರ್ತಿಯ ದಕ್ಷಿಣಾಭಿಮುಖವಾಗಿರುವುದು ವಿಶೇಷ. ಈ ಮೂರ್ತಿ ಎದುರಿಗೆ ನಂದಿ ವಿಗ್ರಹವಿದೆ. ಪ್ರತಿ ವರ್ಷ ಶ್ರಾವಣ ಮಾಸದ ನೂಲ ಹುಣ್ಣಿಮೆಯ ದಿನದಂದು ವೀರಭದ್ರೇಶ್ವರ ಜಾತ್ರೆ ಜರುಗುತ್ತದೆ.

---

12. ದಿ. ಕುಲಕರ್ಣಿ ನಾರಾಯಣರಾಯರು, 'ಶೈವಲ್ಯಾಶ್ರಮಸ್ವಾಮಿ ಮಹಾರಾಜರ ಜೀವನ ಚರಿತ್ರೆ', ಪುಟ - 389

### 3.4 ಕಾಳಿಕಾ ದೇವಾಲಯ

ಮುನವಳ್ಳಿ ಊರಿನ ಸೂಲಕಟ್ಟಿ ಅಗಸಿಯಿಂದ ಪೂರ್ವದಿಕ್ಕಿಗೆ "ಕಾಳಿಕಾ ಮಾತೆ" ದೇವಾಲಯವಿದ್ದು. ಇದು ಇಲ್ಲಿಯ ಕೋಟೆಯಲ್ಲಿ ಈ ಹಿಂದೆ ವಾಸವಿದ್ದ ಶಿಂಧೆ ಹೋಳ್ಕರ ಮಹಾರಾಜರು ವಿಜಯದಶಮಿಯಂದು ಆನೆ ಅಂಬಾರಿ ಸಹಿತ ಇಲ್ಲಿಗೆ ಆಗಮಿಸಿ ಬನ್ನಿ ಮುಡಿಯುವ ಪರಂಪರೆ ಹೊಂದಿದ ದೇವಾಲಯವಾಗಿದೆ.

ಇಂದಿಗೂ ಕೂಡ ಆನೆಬಂಡಿ ಮಾಡಿ(ಹುಚ್ಚಯ್ಯ) ಮುನವಳ್ಳಿಯ ಎಲ್ಲಾ ದೇವಾಲಯಗಳ ಪಲ್ಲಕ್ಕಿಗಳು ಉತ್ಸವದಲ್ಲಿ ಪಾಲ್ಗೊಂಡು ಪ್ರತಿ ಮನೆಯ ಓರ್ವ ಸದಸ್ಯರೊಂದಿಗೆ ಮೆರವಣಿಗೆ ಮೂಲಕ ಕಾಳಿಕಾದೇವಾಲಯಕ್ಕೆ ಆಗಮಿಸಿ "ಬನ್ನಿ ಮುಡಿಯುವ" ಸಂಪ್ರದಾಯವಿರುವುದು. ಇಲ್ಲಿ ಪ್ರತಿ ದಿನ ಅರ್ಚನೆ ಜರುಗುತ್ತಿದ್ದು. ದೇವಾಲಯ ಆವರಣದಲ್ಲಿ ಬಾವಿ, ಕಲ್ಯಾಣ ಮಂಟಪಗಳಿದ್ದು ವಿವಾಹ. ಜವುಳ, ಇನ್ನಿತರ ಕಾರ್ಯಕ್ರಮಗಳು ಜರುಗುತ್ತವೆ.

### 3.5 ಭೀಮಾಶಂಕರ ಶಿವಲಿಂಗ

ನದಿಯ ದಡಕ್ಕೆ ಸಮೀಪದಲ್ಲಿ ವೇದಮೂರ್ತಿ ಶ್ರೀ ರಾಮಾಚಾರ್ಯ ಶಿರಸಂಗಿಯವರ ಮನೆಯನ್ನು ಕಾಣಬಹುದು.ಶ್ರೀ ರಾಮಾಚಾರ್ಯರು ಮನೆಯನ್ನು ಕಟ್ಟಿಸಲು ಪಾಯಾ ತೋಡುವಾಗ ಭೂಮಿಯಲ್ಲಿ ಒಂದು ಶಿವಲಿಂಗ ದೊರಕಿತಂತೆ ಆ ಲಿಂಗವನ್ನು ಶಿಂಧೆ ಹೋಳ್ಕರ ಮಹಾರಾಜರ ಅಪ್ಪಣೆ ಮೇರೆಗೆ ತಮ್ಮ ಮನೆಯಲ್ಲಿಯೇ ಪ್ರತಿಷ್ಠಾಪಿಸಿ ಪೂಜೆಗೈಯುತ್ತ ಅದಕ್ಕೆ "ಭೀಮಾಶಂಕರ"ಎಂಬ ಹೆಸರಿನಿಂದ ಕರೆದರು. ಇಂದಿಗೂ ಇದನ್ನು ಕಾಣಬಹುದು.

### 3.6 ಶ್ರೀ ರುಕ್ಮಿಣಿ–ವಿಠ್ಠಲ ಮಂದಿರ ಮುನವಳ್ಳಿ

ಮುನವಳ್ಳಿಯ ಮಲಪ್ರಭಾ ನದಿ ದಡದಲ್ಲಿ ಬಿಳಿಯ ಸುಣ್ಣದ ಗೋಡೆಗಳಿಂದ ಕೇಸರಿಧ್ವಜದೊಂದಿಗೆ ಮಂದಿರ ಕಾಣುತ್ತದೆ. ನದಿಯ ಪಕ್ಕದಲ್ಲಿ ನಿರ್ಮಾಣವಾಗಿರುವ ಈ ಮಂದಿರ ಮೆಟ್ಟಿಲುಗಳನ್ನು ಹೊಂದಿದ್ದು "ರುಕ್ಮಿಣಿ–ವಿಠ್ಠಲ" ಮಂದಿರ ಎಂದು ಕರೆಯಲಾಗುವ ಈ ದೇವಾಲಯ 1904ರಲ್ಲಿ ನಿರ್ಮಾಣವಾಗಿದ್ದು. 1963ರಲ್ಲಿ ಕರ್ನಾಟಕದಲ್ಲಿ ಪ್ರಪ್ರಥಮವಾಗಿ ಗ್ರಂಥರಾಜ ಶ್ರೀ ಜ್ಞಾನೇಶ್ವರಿ ಸಾಮೂಹಿಕ ಪಾರಾಯಣವನ್ನು ಅತೀ ವಿಜೃಂಭಣೆಯಿಂದ ಆಚರಿಸಿದರು.

ಅದರ ನೇತೃತ್ವವನ್ನು ಶ್ರೀಗುರು ಬಾಬಾಸಾಹೇಬ ಆಜರೇಕರ(ಫಡದ ಗುರುಗಳು), ಶ್ರೀ ಗುರು ಕಾಕಾ ಸಾಹೇಬರು ದಹಿಸಿಕೊಂಡರು. ನಂತರ 1970ರಲ್ಲಿ ಶ್ರೀ ಸಂತ ಶಿರೋಮಣಿ ನಾಮದೇವ ಮಹಾರಾಜರ ಸಪ್ತ ಶತಾಬ್ದಿಯನ್ನು ಸರ್ವಧರ್ಮ ಸಮನ್ವಯವಾಗಿ ಆಚರಿಸಲಾಯಿತು.

1902ರಲ್ಲಿ ಈ ಹರಿನಾಮ ಸಂಕೀರ್ತನವನ್ನು ಹ.ಭ.ಪ.ಶ್ರೀ ಜ್ಯೋತಿರ್ಲಿಂಗಪ್ಪ ಗಾಯಡೋಳೆ, ಅಂಬಾಜಿ ರೇಣಕೆ ಶಟವಪ್ಪ ಮಿರಜಕರ, ಶ್ರೀ ಕೃಷ್ಣರಾಯರು ಸರದೇಶಪಾಂಡೆ, ವೆಂಕಣ್ಣ ಜೋಶಿ ಮೊದಲಾದವರು ಸ್ಥಾಪಿಸಿದರು.

1904ರಲ್ಲಿ ನಾಸಿಕದಿಂದ ಶ್ರೀ ಗುರು ಶ್ರೀ ನಾಸಿಕಕರ ಮಹಾರಾಜರು ತೀರ್ಥಯಾತ್ರೆ ಮಾಡುತ್ತಾ ಮುನವಳ್ಳಿಗೆ ಬಂದಾಗ ಇಲ್ಲಿಯ ನದಿ, ಭಕ್ತ ಸಮೂಹ ನೋಡಿ ಇಲ್ಲಿಯೇ ನೆಲೆಸಿದರು. ಆ ನಂತರ ಇಲ್ಲಿ ಶಿಥಿಲಾವಸ್ಥೆಯಲ್ಲಿದ್ದ ವಿಠ್ಠಲ ಮಂದಿರು ಕಂಡು ಸ್ವತಃ ತಾವೇ ಜನರ ಸಹಾಯದಿಂದ ಕಲ್ಲು, ಮಣ್ಣು ಹೊತ್ತು ಶ್ರೀ ವಿಠ್ಠಲ ಮಂದಿರ ಜೀರ್ಣೋದ್ಧಾರ ಮಾಡಿದರು.

ಪ್ರತಿ ವರ್ಷ ಶ್ರಾವಣ ಶುದ್ಧ ದಶಮಿ ಸ್ಥಾಪನಾ 8 ನೇದಿವಸ ದಿಂಡಿ ಸೋಹಳಾವನ್ನು ಇಲ್ಲಿ ಬಹಳ ವಿಜೃಂಭಣೆಯಿಂದ ಆಚರಿಸಿಕೊಂಡು ಬರುತ್ತಿರುವರು.

### 3.7 ಅಜ್ಜನಕಟ್ಟೆ (ಆಶ್ವತ್ಥ ಕಟ್ಟೆ)

ಮುನವಳ್ಳಿಯ ಮಲಪ್ರಭಾ ನದಿ ದಡದಲ್ಲಿ ಅಂದರೆ ವಿಠ್ಠಲಮಂದಿರ ಮಾರ್ಗವಾಗಿ ಕೋಟೆಯನ್ನು ದಾಟಿ ತೆಗ್ಗಿಹಾಳ ಕಡೆಗೆ ಸಾಗುವ ಮಾರ್ಗದಲ್ಲಿ ಆಲಕಟ್ಟಿ ಮಸೀದೆ ಓಣಿಯ ಬಳಿ ಒಂದು ರಸ್ತೆ ಮಲಪ್ರಭಾ ನದಿಯತ್ತ ಸಾಗುವ ಮಾರ್ಗಮಧ್ಯದಲ್ಲಿ ಶ್ರೀ ವಿಷ್ಣು ತೀರ್ಥರ ಸ್ಮರಣೆಯ ಅಜ್ಜನಕಟ್ಟೆ(ಅಶ್ವತ್ಥ ಕಟ್ಟೆ) ಇದೆ. ಇದೂ ಕೂಡ ಮುನವಳ್ಳಿಯ ಪವಿತ್ರ ಕ್ಷೇತ್ರ. ಈ ಕುರಿತು ಉಲ್ಲೇಖವನ್ನು "ಅವಧೂತ ಶಿರೋಮಣಿ ಶ್ರೀ ವಿಷ್ಣುತೀರ್ಥರು" ಎಂಬ ಗ್ರಂಥದಲ್ಲಿಯ ಪುಟ ಸಂಖ್ಯೆ 50 ರಿಂದ 59 ರ ವರೆಗೆ ಮುನವಳ್ಳಿಯಲ್ಲಿ ಮುನಿಚರಿತರು ಎಂಬ ಭಾಗದಲ್ಲಿ ವಿಷ್ಣುತೀರ್ಥರು ಮುನವಳ್ಳಿಯಲ್ಲಿ ತಂಗಿದ ದಿನಗಳಲ್ಲಿ ಜರುಗಿದ ವಿವಿಧ ಘಟನೆಗಳನ್ನು ದೃಷ್ಟಾಂತಗಳನ್ನು ಉಲ್ಲೇಖಿಸಿರುವರು.

ಈ ಗ್ರಂಥವನ್ನು ಪಂಡಿತ ಶ್ರೀಕರಾಚಾರ್ಯ ಅಡವಿಯವರು ರಚಿಸಿದ್ದು ಶ್ರೀ ವ್ಯಾಸತತ್ವಜ್ಞ ಪ್ರತಿಷ್ಠಾನ ಮಾದನೂರ ಇವರು ಪ್ರಕಟಿಸಿದ್ದು 2012 ರಲ್ಲಿ ಬಿಡುಗಡೆಗೊಳಿಸಲಾಗಿದೆ ಈ ಗ್ರಂಥದಲ್ಲಿ ಮುನವಳ್ಳಿಯಲ್ಲಿ ಮುನಿಚರಿತರು ಅದ್ಯಾಯದಲ್ಲಿನ ಭಾಗವನ್ನು ಇಲ್ಲಿ ನೀಡಲಾಗಿದೆ.

ಶೂರ್ಪ ಗ್ರಾಮದಿಂದ ಹೊರಟ ಆಚಾರ್ಯರು ಮಾರ್ಗ ಮಧ್ಯದಲ್ಲಿ ಸಿಕ್ಕುವ ಗ್ರಾಮಗಳ ದೇಗುಲಗಳಲ್ಲಿ ತಂಗುತ್ತ ತಮ್ಮ ಉಪದೇಶಾಮೃತದಿಂದ ಗ್ರಾಮಸ್ಥರ ಧರ್ಮ ಶ್ರದ್ಧೆಯನ್ನು ಹೆಚ್ಚಿಸುತ್ತ ಮುಂದೆ ನಡೆದರು. ಜನ ಸಮ್ಮರ್ದದಿಂದ ಯಾವಾಗಲೂ ದೂರವಿರುತ್ತಿದ್ದ ಆಚಾರ್ಯರು "ಮಂದಿ ಇಲ್ಲದೇ ಇದ್ದ ಸ್ಥಳವೇ ಛಂದ ನಮಗೆಂದಿಗಾದರು ಮಂದಿ ಇದ್ದಲ್ಯಸುರರೇ ಇರುತಿಹರು" ಎಂದು ನಿರ್ಜನವಾದ ಅರಣ್ಯ ಪ್ರದೇಶಗಳಲ್ಲೇ ವಾಸಿಸುತ್ತಿದ್ದರು ಹೀಗೆ ಗ್ರಾಮದಿಂದ ಗ್ರಾಮಕ್ಕೆ ಸಂಚರಿಸುತ್ತ ಬರುತ್ತಿರಲು ಧಾರವಾಡ ಪ್ರಾಂತದ ಸವದತ್ತಿ ಸಮೀಪದ "ಮುನಿವಳ್ಳಿಯ" ಸಮೀಪ ಉತ್ತರ ವಾಹಿನಿಯಾಗಿ ಹರಿಯುತ್ತಿರುವ ಮಲಾಪಹಾರಿ(ಮಲಪ್ರಭಾ) ನದಿ ತೀರದ ಪ್ರಶಾಂತ ವಾತಾವರಣ ಅವರಿಗೆ ಬಹಳ ಮಚ್ಚಿಕೆಯಾಯಿತು.[13]

"ಶುದ್ಧ ಚಲ್ವಿಕೆಯಿಂದ ಜನರಿಗೆ ಮುದ್ದು ಬರುತಿರುವಂಥ ಪರಮ ಪ್ರಸಿದ್ಧ ಮುನಿವಳ್ಳಿ" ತಮ್ಮ ಸಾಧನೆಗೆ ತಕ್ಕುದಾದ ಏಕಾಂತ ಸ್ಥಳವೆಂದು ಅವರಿಗೆ ತೋರಿತು. "ಪಲ್ಲೀತಿ ಪ್ರಥಿತತರಾಂ ತತೋ ಮುನೀನಾಂ ಪ್ರಾಪಾಲಂ ವಿಜನವನಂ ಸ ಕಾಮಯಾನಃ" ಹಲವಾರು ಮುನಿಪುಂಗವರ

13. ಗುರುಬಾಬಾಸಾಹೇಬ ಆಜರೇಕರ ಸಾಂಪ್ರದಾಯಿಕ ಭಜನಾ ಮಾಲಿಕೆ, ಮುನ್ನುಡಿ – ಪುಟ – 9

ಸಾಧನ ಕ್ಷೇತ್ರವೂ, ಗೌತಮ ಋಷಿಗಳ ತಪಸ್ಸಿನ ಭೂಮಿಯೂ ಆದಂತಹ ಆ ಪವಿತ್ರ ಪ್ರದೇಶದಲ್ಲಿ ಅನುಷ್ಠಾನ ಪರವಾಗಿ ನೆಲೆಸಲು ಬಯಸಿದರು. “ಅಲ್ಲೇ ಬದರಿಯಲ್ಲಿ ಇರುವೋದೆಲ್ಲ ಇರುತಿಹುದು. ಅಲ್ಲೆ ವಾಸ ಮಾಡಿದನು ಮನದಲ್ಲಿ ಸಂಭ್ರಮಪಡುತ । ಗುರುಗಳೇ ಇಲ್ಲೆ ಈ ಸ್ಥಳ ನಮಗೆ ನಿರ್ಮಿಸಿಕೊಟ್ಟರೆಂತ್ಯೆಂದು ಭಾವಿಸಿ ಅಲ್ಲೇ ಬದರೀಶನನ್ನು ಸ್ಮರಿಸುತ್ತ ಶಿಷ್ಯಪರಿವಾರದೊಂದಿಗೆ ಅಲ್ಲಿಯೇ ಪರ್ಣಕುಟೀರವೊಂದನ್ನು ನಿರ್ಮಿಸಿಕೊಂಡು ವಾಸಿಸತೊಡಗಿದರು.

ಸೇವಿಸಿದವರ ಪಾಪಗಳನ್ನು ಕಳೆಯುವುದರಿಂದ ಮಲಾಪಹಾರೀ ಎಂದು ಖ್ಯಾತಳಾದ ಮಲಪ್ರಭಾ ನದಿ ತೀರದ ಪ್ರದೇಶದಲ್ಲಿ ಆಚಾರ್ಯರ ಸಾಧನೆ ಮುಂದುವರೆಯಿತು. “ಮಲಹಾರ್ಯಾಂ ಜನಾರ್ಧನಮ್” ಎಂದು ಹೇಳಿದಂತೆ ಮಲಪ್ರಭಾ ನದಿಯಲ್ಲಿ ಜನಾರ್ದನನ್ನು ಸ್ಮರಿಸುತ್ತ ಸ್ನಾನಾದಿಗಳನ್ನು ನೆರವೇರಿಸಿಕೊಂಡು ನಿತ್ಯ ಕರ್ಮಗಳನ್ನು ನೆರವೇರಿಸಿಕೊಂಡು ನಿರಂತರ ಪಾಠ ಪ್ರವಚನದಲ್ಲಿ ತಮ್ಮನ್ನು ತೊಡಗಿಸಿಕೊಂಡರು. ಬ್ರಹ್ಮಚರ್ಯ ಮತ್ತು ಗೃಹಸ್ಥಾಶ್ರಮಗಳನ್ನು ಶಾಸ್ತ್ರೋಕ್ತ ರೀತಿಯಲ್ಲಿ ಪೂರೈಸಿದ್ದ ಆಚಾರ್ಯರು ಈಗ ವಾನಪ್ರಸ್ಥಾಶ್ರಮಿಯಾಗಿ “ಮುನಿವಳ್ಳಿ” ಬಳಿಯ ವಿಜನ ದೇಶದಲ್ಲಿ ಮುನಿಗಳಂತೆ ಜೀವಿಸತೊಡಗಿದರು.

ಪತ್ನಿಯೊಂದಿಗೆ ಇದ್ದರೂ ಏಕಾಪತ್ಯ ಜನನ ಪರ್ಯಂತರ ಸಂಸಾರ ಜೀವನವನ್ನು ನಡೆಸಿದ ಆಚಾರ್ಯರು ಸಾಂಸಾರಿಕ ಸುಖ ಭೋಗಗಳನ್ನು ತ್ಯಜಿಸಿದರು. ಅತ್ಯಂತ ಕಠಿಣ ತಮವಾದ ಸಾಮಾನ್ಯರಿಗೆ ಕಲ್ಪಿಸಲೂ ಅಶಕ್ಯವಾದ “ಅಸಿಪತ್ರ ವ್ರತ”ವನ್ನು ಕೈಗೊಂಡರು. ಪರಸ್ಪರರ ಆಕರ್ಷಣೆಯಿಂದ ದೂರವಾಗಿರುವುದು ಒಂದು ವೇಳೆ ಮನಸ್ಸು ವಿಕಾರಗೊಂಡರೆ ಅದೇ ಖಡ್ಗದಿಂದ ಪ್ರಾಣ ತೆಗೆದುಕೊಳ್ಳುವ ಸಂಕಲ್ಪ ಮಾಡಿ ಸ್ವೀಕರಿಸಿದ ವೃತಕ್ಕೆ ಅಸಿಪತ್ರ ವೃತವೆಂದು ಹಸರು. ಮನಸ್ಸನ್ನು ಸಂಪೂರ್ಣವಾಗಿ ವಶಪಡಿಸಿಕೊಳ್ಳದೇ ಇರುವವರಿಗೆ ಊಹಿಸಲೂ ಅಸಾಧ್ಯವಾದ ಚರಿತ್ರೆಯಲ್ಲೇ ದುರ್ಲಭವಾದ ಇಂತಹ ವೃತವನ್ನು ಆಚರಿಸಿದ ಆಚಾರ್ಯರು “ಅರಣ್ಯಕಾಚಾರ್ಯರು” ಅಡವಿ ಆಚಾರ್ಯರೆಂದೇ ಪ್ರಸಿದ್ಧರಾದರು. ಅವರ ಮುಂದಿನ ವಂಶವೆಲ್ಲ ಅಡವಿ ವಂಶವೆಂದೇ ಪ್ರಸಿದ್ಧವಾಯಿತು.

ಪ್ರತಿನಿತ್ಯವೂ ಉತ್ತರಾತ್ರಿಯಲ್ಲಿ ಆರು ಘಳಿಗೆ ರಾತ್ರಿ ಇರುವಾಗ ನಿದ್ರೆಯಿಂದ ಎಚ್ಚೆತ್ತು ಉಪದಿಷ್ಟ ಮಾರ್ಗದಿಂದ ಹರಿಯ ಧ್ಯಾನ ನಂತರ ನದಿಗೆ ನಡೆದು ಬ್ರಾಹ್ಮೀ ಮುಹೂರ್ತದಲ್ಲಿ ಎದ್ದು ಮಲಪ್ರಭಾ ನದಿಯಲ್ಲಿ ಜನಾರ್ಧನನನ್ನು ಸ್ಮರಿಸಿ ನದ್ಯಭಿಮಾನಿ ದೇವರಿಗೆ ಅರ್ಘ್ಯನೀಡಿ.ಸ್ನಾನಾಂಗ ತರ್ಪಣ ನೀಡುತ್ತ ಪದ್ಮಾಸನದಲ್ಲಿ ಕುಳಿತು ಸುಮಧ್ವ ವಿಜಯವನ್ನು ಒಂದು ಸಾವಿರದ ಎಂಟು ಶ್ಲೋಕಗಳನ್ನು ಸಂಪೂರ್ಣವಾಗಿ ಪಾರಾಯಣ ಮಾಡುತ್ತಿದ್ದರು.ಇವರು ಸುಮಧ್ವ ವಿಜಯದ ಹದಿನಾರು ಸರ್ಗಗಳ ಪ್ರಮೇಯಗಳನ್ನು ಹಾಗೂ ಒಂದೊಂದು ಸ್ವರ್ಗದ ಫಲವನ್ನು ಪ್ರತ್ಯೇಕವಾಗಿ ತಿಳಿಸುವ “ಶ್ರೀ ಮತ್ಸುಮಧ್ವವಿಜಯ ಪ್ರಮೇಯ ಫಲ ಮಾಲಿಕಾ”ಎಂಬ ಸುಂದರ ಎಪ್ಪತ್ತೆರಡು ಶ್ಲೋಕಗಳ ಕೃತಿಯೊಂದನ್ನು ರಚಿಸಿರುವರು.ಇವರು ಪ್ರತಿನಿತ್ಯ ಸೂರ್ಯಾಸ್ತದ ಸಮಯಕ್ಕೆ ಎರಡು ಘಳಿಗೆ,ಸಾಯಂಕಾಲ ಪೂಜೆ ಇತ್ಯಾದಿಗಳನ್ನು ಮುಗಿಸಿ ನಂತರ ಎಂಟು ಘಳಿಗೆಗಳ ಕಾಲ

ಗ್ರಂಥಾವಲೋಕನ ಹಾಗೂ ಗ್ರಂಥ ನಿರ್ಮಾಣಕ್ಕಾಗಿ ಮೀಸಲಿಡುತ್ತಿದ್ದರು.ಈ ರೀತಿಯಾಗಿ ಹನ್ನೆರಡು ವರ್ಷಗಳವರೆಗೆ ವಾನಪ್ರಸ್ಥಾಶ್ರಮವನ್ನು ಆಚರಿಸಿ ಅನಿತರ ಸಾಧಾರಣ ವೈರಾಗ್ಯದಿಂದ,ಅಡವೀ ಆಚಾರ್ಯರು,ಅರಣ್ಯಕಾಚಾರ್ಯರು,ಅವಧೂತ ಶಿರೋಮಣಿಗಳು ಎಂದು ಪ್ರಖ್ಯಾತರಾದ ಅಡವೀ ಆಚಾರ್ಯರು ತಮ್ಮ ವಾನಪ್ರಸ್ಥದ ಅವಧಿಯಲ್ಲಿಯೇ ಅನೇಕ ಗ್ರಂಥಗಳನ್ನು ಬರೆದಿದ್ದು.ಇವರ ಗ್ರಂಥಗಳು ಇಷ್ಟೇ ಎಂದು ನಿಖರವಾಗಿ ತಿಳಿದು ಬಂದಿಲ್ಲ.

ಮುನವಳ್ಳಿಯಲ್ಲಿ ಜಯತೀರ್ಥಾಚಾರ್ಯರ ಕೀರ್ತಿ ದಿನದಿನಕ್ಕೆ ಬೆಳೆಯ ತೊಡಗಿತು. ಇವರನ್ನು ಸೇವಿಸಿ ಆನಂದಿಸುವವರಂತೆ ಇವರನ್ನು ದೂಷಿಸುವ ಮತ್ಸರಿಗಳ ಮಾತ್ಸರ್ಯವೂ ಬೆಳೆಯಿತು. ಗುಣ ಮತ್ಸರಿಗಳು ಎಲ್ಲ ಕಾಲದಲ್ಲಿಯೂ ಇರುವವರೇ ಅಂತಹ ಮಾತ್ಸರ್ಯಯುಕ್ತರಾದ ಕೆಲವು ಕುಹಕಿಗಳು ಇವರನ್ನು ನಿಂದಿಸುತ್ತಿದ್ದರು. ಇವರ ಶಿಷ್ಯ ಸಂಪತ್ತನ್ನು ಕಂಡು ಕರುಬಿದ ಕೆಲವು ಅಸೂಯಾಗ್ರಸ್ತರು ಇವರ ಶಿಷ್ಯರನ್ನು ನಿಂದಿಸಿದರು. ಇವರು ಮಧ್ಯಾಹ್ನದವರೆಗೆ ಶ್ರವಣ ಮಾಡಿ ಪಂಡಿತರಾದರು, ಇವರ ಗುರುಗಳು ಎರಡು ಘಳಿಗೆ ಮಾತ್ರ ಶ್ರವಣದಿಂದ ವಿದ್ವಾಂಸರು, ಅವರ ಗುರುಗಳಂತೂ ಅಧ್ಯಯನವೇ ಮಾಡದೇ ಚಿಟಿಕೆ ಒಳಗೆ ಪಂಡಿತರಾದರು, ಎಷ್ಟೋ ದಿವಸಗಳವರೆಗೆ ವಾಖ್ಯಾರ್ಥ ವಿಚಾರಗಳನ್ನು ಮಾಡಿದರೂ ದೊರಕದ ವಿದ್ಯೆಯು ಇವರಿಗೆ ಸುಮ್ಮನೆ ಶ್ರವಣ ಮಾತ್ರದಿಂದ ಹೇಗೆ ದೊರಕಲು ಸಾಧ್ಯ ಎಂಬಿತ್ಯಾದಿಯಾಗಿ ದೂಷಣೆ ಮಾಡಿದರು.[14]

ಈ ರೀತಿಯಾಗಿ ಅನೇಕರು ನಿಂದಿಸುತ್ತಾರೆಂಬುದನ್ನು ತಿಳಿದುಕೂಡ ಜಯತೀರ್ಥಾಚಾರ್ಯರು ಏನೂ ಹೇಳಲಿಲ್ಲ. ಮುಗುಳ್ನಕ್ಕು ಸುಮ್ಮನಾದರು ಅಷ್ಟೆ. ಕೆಲವು ಶಿಷ್ಯರು ಬಂದು ಹೀಗೆ ನಿಂದಿಸುವುದನ್ನು ಕೇಳಿ ಕೂಡ ಹೇಗೆ ಸುಮ್ಮನಿರುವಿರಿ ಎಂದು ಪ್ರಶ್ನೆಮಾಡಲು ಜಯತೀರ್ಥಾಚಾರ್ಯರು ಮುಗುಳು ನಗುತ್ತ ಉತ್ತರಿಸಿದರು. ಅಯೋಗ್ಯರ ನಿಂದೆಯನ್ನು ಮನಸಿಗೆ ತಂದು ಕೊಳ್ಳಬೇಡಿರಿ. ಖಳರ ನಿಂದೆಯಿಂದ ನಮಗೇನು ಹಾನಿಯಿಲ್ಲ "ಖಳರ ನಿಂದೆಯಲೇನು ಆಗುವುದು । ಮುಖ್ಯ ತಮಸಿನ ಒಳಗೆ ತಾವೇ । ಬೊಕ್ಕ ಬೋರಲ ಬಿದ್ದು ಅದರೊಳು ಸಿಕ್ಕು ಒದ್ದಾಡುವರು ಅಲ್ಲೆ ದಿಕ್ಕು ಕಾಣದಲೆ" ಯೋಗ್ಯರು ಸಜ್ಜನರನ್ನು ನಿಂದಿಸಿದರೆ ಅದು ಅವರ ಪ್ರಾರಬ್ಧಕ್ಕನುಗುಣವಾಗಿ ಅವರ ಪೂರ್ವ ಜನ್ಮಾರ್ಜಿತ ಪುಣ್ಯ ನಾಶ ಮಾಡುತ್ತದೆ ಎಂದು ತಿಳಿದು ತಾನು ಮಾತ್ರ ಪ್ರತಿಕ್ರಯಿಸದೇ ಸುಮ್ಮನಿರಬೇಕು. ಉತ್ತರ ನೀಡಿದರೆ ಕಲಹ ಪರಂಪರೆ ಹೀಗೆ ಮುಂದುವರೆದೀತು. ಸ್ತುತಿ ನಿಂದೆಗಳಿಗೆ ಶಿಲಾಸದೃಶನಾಗಿ ನಿಂತು ತನ್ನ ಉದ್ಧಾರ ತಾನೇ ಮಾಡಿ ಕೊಂಡವನೇ ಜಾಣ ಎಂದು ಉಪದೇಶ ನೀಡಿದರು.

ತಮ್ಮ ಗುರುಗಳ ಸ್ಥಿತ ಪ್ರಜ್ಞೆತ್ವೆಯನ್ನು ಕಂಡ ಅವರ ಶಿಷ್ಯರುಗಳು ತಮ್ಮ ಗುರುಗಳ ಉನ್ನತ ಚಿಂತನೆಯನ್ನು ಅರಿತು ಗುರು ಭಕ್ತಿ ಪರವಶರಾದರು. ಈ ಸಮಯದಲ್ಲೇ ಅವರಿಗೆ ಪತ್ನಿ ವಿಯೋಗವಾಯಿತು.ಗುರುಪತ್ನಿಗಾಗಿ ಶೋಕಿಸುತ್ತಿದ್ದ ಶಿಷ್ಯರನ್ನು ಹಾಗೂ ತಾಯಿಗಾಗಿ ಶೋಕಿಸುತ್ತಿದ್ದ ಪುತ್ರ ಕೃಷ್ಣಾಚಾರ್ಯರನ್ನು ಆಚಾರ್ಯರೇ ಸಮಾಧಾನ ಪಡಿಸಿದರು. ತಾವೇ ಗ್ರಂಥಗಳಲ್ಲಿ ತಿಳಿಸಿದಂತೆ ಜೀವನ ಯಜ್ಞಕ್ಕೆ ಮರಣವೇ ಅವಭೃತ ಸ್ನಾನ, ಹುಟ್ಟಿದವನಿಗೆ ಮರಣ ತಪ್ಪದು, ಅವಶ್ಯವಾಗಿ

14. ಪಂ. ಶ್ರೀಕರಾಚಾರ್ಯ ಅಡವಿ, "ಅವಧೂತ ಶಿರೋಮಣಿ ಶ್ರೀ ವಿಷ್ಣುತೀರ್ಥರು", ಪುಟ 50–59

ನಡೆಯುವುದಕ್ಕೆ ಶೋಕಿಸಿ ಪ್ರಯೋಜನವಿಲ್ಲ. ಪುಣ್ಯ ಸಾಧನ ಮಾಡಿಕೊಂಡು ನಿರಂತರ ಭಗವತ್ಸ್ಮರಣೆಯನ್ನು ಮಾಡುತ್ತಾ ಮರಣಕ್ಕೆ ಸನ್ನದ್ಧರಾಗಿರಬೇಕು. ಹಳೆಯ ವಸ್ತ್ರವನ್ನು ತೆಗೆದು ಹೊಸ ವಸ್ತ್ರಧಾರಣೆ ಮಾಡಿದ ಹಾಗೆ, ಹಳೆಯ ಶರೀರವು ಕಳಚಿ ಮತ್ತೊಂದು ಶರೀರ ಪ್ರಾಪ್ತವಾಗುತ್ತದೆ. ಅದಕ್ಕಾಗಿ ಶೋಕಿಸಿ ಪ್ರಯೋಜನವಿಲ್ಲವೆಂದು ತಿಳಿಸಿದರು.

ಇಲ್ಲಿಯವರೆಗೆ ಉಪಲಬ್ಧವಾದ ವಿಷ್ಣುತೀರ್ಥರ ಕೃತಿಗಳು ಸುಮಾರು ಹತ್ತೊಂಬತ್ತು ಇದರಲ್ಲಿ ಸುಮಧ್ವ ವಿಜಯ, ಪ್ರಮೇಯ ಫಲಮಾಲಿಕಾ ಮತ್ತು ರಮಾಸ್ತೋತ್ರ ಎರಡನ್ನು ಬಿಟ್ಟರೆ ಉಳಿದೆಲ್ಲ ಕೃತಿಗಳು ಪ್ರಾಯಶಃ ಮುನಿವಳ್ಳಿಯಲ್ಲಿಯೇ(ಸನ್ಯಾಸಕ್ಕೆ ಪೂರ್ವದಲ್ಲಿಯೇ) ರಚಿತವಾದವುಗಳು ಇವುಗಳಲ್ಲಿ ಸ್ವತಂತ್ರ ಗ್ರಂಥಗಳು, ಟಪ್ಪಣೀ ಗ್ರಂಥಗಳು, ಪ್ರಮೇಯ ಸಂಗ್ರಹ, ಸ್ತೋತ್ರಗಳು, ಪತ್ರ ಸಾಹಿತ್ಯ ಇತ್ಯಾದಿಯಾಗಿ ಬಹಳ ವಿಸ್ತ್ರತವಾಗಿದೆ ಇವರ ಗ್ರಂಥ ಪ್ರಪಂಚ.ಇವರ ಸ್ಮರಣೆಯು ಇಂದಿಗೂ ಮುನವಳ್ಳಿಯಲ್ಲಿ ಇವರು ನೆಲೆಸಿದ ಸ್ಥಳದಲ್ಲಿ ನಡೆಯುತ್ತಿದೆ.ಅಜ್ಜನಕಟ್ಟೆ(ಅಶ್ವತ್ಥಕಟ್ಟೆ) ಎಂದು ಕರೆಯಲಾಗುವ ಈ ಸ್ಥಳ ಮುನವಳ್ಳಿಯ ನದಿ ದಡದಲ್ಲಿರುವ ವಿಠೋಬಾ ಮಂದಿರದ ಸ್ಥಳದಿಂದ ತೆಗ್ಗಿಹಾಳಕ್ಕೆ ಹೊರಡುವ ಊರ ಒಳಗಿನ ದಾರಿ ಅಂದರೆ ಪೇಟೆಯ ಮೂಲಕ ಹೋಗುವ ದಾರಿ ಮಧ್ಯದಲ್ಲಿ ಕಟ್ಟಿಗೆಯ ಅಡ್ಡೆಗಳಿವೆ.ಆಲಕಟ್ಟಿ ಮಸೀದೆ ಓಣಿ ಇರುವ ನದಿಯ ಕಡೆಗೆ ಹೋಗುವ ಮಾರ್ಗದಿಂದ ಸಾಗಿದರೆ ಅಶ್ವತ್ಥಕಟ್ಟೆ ತಲುಪಬಹುದು. ಇಂದಿಗೂ ಇಲ್ಲಿ ಅಡವಿ ಆಚಾರ್ಯರ ಸ್ಮರಣೆಯ ಕಾರ್ಯಕ್ರಮಗಳು ಜರುಗುತ್ತವೆ.

**3.8 ಸಾವಳಗಿ ಮಠ**

ಪಂಚಲಿಂಗೇಶ್ವರ ದೇವಾಲಯಕ್ಕೆ ಹೋಗುವ ಮೊದಲು ತಿರುವಿನಲ್ಲಿ ಸಾವಳಗಿ ಮಠ ಕಾಣಬಹುದು.ಸಾವಳಗಿ ಮೂಲ ಸಂಸ್ಥಾನಿಕರಿಗೂ ಇದಕ್ಕೂ ನೇರ ಸಂಬಂಧವಿದ್ದು. ಮೊದಲಿನ ಸಾವಳಗಿ ಪೀಠದ ಗುರುಗಳು ತಮ್ಮ ಯಾತ್ರೆ ಸಂದರ್ಭದಲ್ಲಿ ಎಲ್ಲಿ ತಮ್ಮ ಭಕ್ತಜನರಿದ್ದರೋ ಅಲ್ಲಿ ಒಂದು ರಾತ್ರಿ ತಂಗುತ್ತಿದ್ದರಂತೆ ಹೀಗೆ ತಂಗುವ ಸ್ಥಳಗಳಲ್ಲಿ ಅಲ್ಲಿಯ ಭಕ್ತ ಸಹಕಾರದಿಂದ ಸಾವಳಗಿ ಮಠ ಸ್ಥಾಪಿಸಿದ್ದರಂತೆ. ಹೀಗಾಗಿ ಕರ್ನಾಟಕದ ಮೂಲೆ ಮೂಲೆಗಳಲ್ಲಿ ಸುಮಾರು ಮುನ್ನೂರಕ್ಕೂ ಹೆಚ್ಚು ಸಾವಳಗಿ ಮಠ ಹೆಸರಿನಿಂದ ಕರೆಯಲ್ಪಡುವ ಮಠಗಳು ಸಿಗುತ್ತವೆ.

ಮೊದಲಿನ ಜನ ಅವರ ಜೊತೆ ಭಕ್ತಿಪೂರ್ವಕ ಒಡನಾಟ ಇಟ್ಟುಕೊಂಡಿದ್ದು, ಪ್ರತಿ ವರ್ಷ ಸಾವಳಗಿಯಲ್ಲಿ ಜರುಗುವ ಜಾತ್ರಾಮಹೋತ್ಸವಕ್ಕೆ ಎಲ್ಲ ಮಠಗಳ ಗ್ರಾಮಗಳ ಭಕ್ತರಿಂದ ದೇಣಿಗೆ ಮತ್ತು ಕಾಣಿಕೆಯ ರೂಪದಲ್ಲಿ ವಸ್ತುಗಳು ಧನದಾನ್ಯ ನೀಡುವ ಜೊತೆಗೆ ಸಾವಳಗಿ ಜಾತ್ರಾ ಮಹೋತ್ಸವದಲ್ಲಿ ಎಲ್ಲ ಕಡೆಗಳಿಂದಲೂ ಭಕ್ತ ಜನಸಾಗರ ಹರಿದು ಬರುತ್ತಿತ್ತುಕಾಲಾನಂತರದಲ್ಲಿ ಈ ಸಂಬಂಧಗಳು ಕಡಿಮೆಯಾಗುತ್ತ ಬಂದಿದ್ದು ಸಾವಳಗಿ ಮಠ ಹೆಸರಿನ ಮಠಗಳು ಮಾತ್ರ ಇಂದಿಗೂ ಉಳಿದುಕೊಂಡು ಬಂದಿದ್ದು ಮುನವಳ್ಳಿಯಲ್ಲಿಯೂ ಕೂಡ ಸಾವಳಗಿ ಮಠ ಇರುವುದು.

### 3.9 ಕಂಬಿಮಠ

ಇದೊಂದು ವಿಶಿಷ್ಟ ಮಠವಾಗಿದ್ದು ಗ್ರಾಮದ ಅಗಸಿ ಬಾಗಿಲಿನ ಮೂಲಕ ಪೇಟೆ ಕಡೆಗೆ ಸಾಗಿ ಬರುವ ದಾರಿಯಲ್ಲಿ ನೇಕಾರ ಓಣಿಯತ್ತ ಸಾಗಿ ಬಂದರೆ ಸಿಗುವ ಮಠವೇ ಕಂಬಿಮಠ.ಇದು ಶ್ರೀಶೈಲ ಮಲ್ಲಿಕಾರ್ಜುನ ದೇವರ ಹೆಸರಿಗೆ ಕಂಬಿಯನ್ನು ತಗೆದುಕೊಂಡು ಹೋಗುವ ಸಂಪ್ರದಾಯ ಹೊಂದಿದ ಮಠವೇ ಕಂಬಿಮಠ.ಇದರ ಮೂಲ ಸ್ಥಾಪಕರಾದ ಚನ್ನಮಲ್ಲಯ್ಯ ಕಂಬಿಮಠ(ಸಂಭಾಳಮಠ) ಮತ್ತು ಶಿವಬಾಯಮ್ಮ ಕಂಬಿಮಠ(ಸಂಭಾಳಮಠ).ಇಬ್ಬರೂ ದೈವ ಭಕ್ತಿಯುಳ್ಳ ದಂಪತಿಗಳು.ಶ್ರೀಶೈಲ ಮಲ್ಲಿಕಾರ್ಜುನನ ಆರಾಧಕರು.ಇವರಿಗೆ ಮಕ್ಕಳಿಲ್ಲದ ಕಾರಣ ರಾಚಯ್ಯ.ಕಂಬಿಮಠ(ಸಂಭಾಳಮಠ) ರನ್ನು ದತ್ತಕ ತಗೆದುಕೊಂಡಿದ್ದರು.ಚನ್ನಮಲ್ಲಯ್ಯನವರು ನಿಧನರಾದಾಗ ಅವರ ಪತ್ನಿ ಕೂಡ ಸಾವಿಗೆ ಶರಣಾದರು.ದೈವಸ್ವರೂಪ ದಂಪತಿಗಳ ಸಮಾಧಿ ಮಠದಲ್ಲಿದ್ದು.ಸಹಗಮನದ ಮೂಲಕ ನಿಧನರಾದ ಪ್ರಯುಕ್ತ ಇಂದಿಗೂ ಎರಡೂ ಗದ್ದುಗೆಗಳ ಪೂಜೆಗೊಳ್ಳುತ್ತಿರುವುದು ಈ ಮಠದಲ್ಲಿನ ವಿಶೇಷ.ಅಷ್ಟೇ ಅಲ್ಲದೇ ಮುರಾಚಯ್ಯ ಸಂಭಾಳಮಠರ ಸಮಾಧಿ ಕೂಡ ಇಲ್ಲುಂಟು.

ಕಂಬಿ ಸೇವೆ ಇಂದಿಗೂ ಈ ಮಠದಿಂದ ಸಾಗಿ ಬರುತ್ತಿರುವುದು ಇಲ್ಲಿನ ಸಾಂಪ್ರದಾಯಿಕ ಆಚರಣೆಗೆ ಹಿಡಿದ ಕೈಗನ್ನಡಿ.ಪ್ರತಿವರ್ಷವೂ ಇಲ್ಲಿನ ಕಂಬಿಯೊಂದಿಗೆ ಶ್ರೀಶೈಲಕ್ಕೆ ಹೋಗಿ ಬರುವ ಸಂಪ್ರದಾಯವಿದೆ.ಅದಕ್ಕಾಗಿ ಭಾರತ ಹುಣ್ಣಿಮೆಗೆ ಕಂಬಿ ಪೂಜೆಗೊಳ್ಳುವುದು ಅಂದರೆ ಶ್ರೀಶೈಲಕ್ಕೆ ಹೋಗುವ ಮುನ್ಸೂಚನೆ ಪೂಜೆಗೊಳ್ಳುವ ಮೂಲಕ ಸಾಗುವುದು.ಹೋಳಿ ಹುಣ್ಣಿಮೆ ಸಬ್ಯಾಟಿ ದಿನ ಊರಲ್ಲಿ ಮೆರವಣಿಗೆಯ ಮೂಲಕ ಅಷ್ಟಗಿಮಠಕ್ಕೆ (ಅಂದರೆ ಊರ ಹೊರಗಿನ ಮಠ) ಕಂಬಿಯನ್ನು ತಗೆದುಕೊಂಡು ಹೋಗಿ ಅಲ್ಲಿ ಇಡುವರು.ನಂತರ ದವನದ ಹುಣ್ಣಿಮೆಯಂದು ಶ್ರೀಶೈಲಕ್ಕೆ ಪಾದಯಾತ್ರೆ ಬೆಳೆಸುವ ಮೂಲಕ ಕಂಬಿಮಠದಿಂದ ಶ್ರೀಶೈಲ ಮಲ್ಲಿಕಾರ್ಜುನನ ಕಂಬಿ ಸೇವೆ ಜರುಗುತ್ತದೆ. ಶ್ರೀಶೈಲವನ್ನು ತಲುಪಿ ಅಲ್ಲಿಂದ ಮರಳಿದ ನಂತರ ಕಂಬಿಯನ್ನು ನೇರವಾಗಿ ಕಂಬಿಮಠಕ್ಕೆ ತರದೇ ಪಂಚಲಿಂಗೇಶ್ವರ ದೇವಾಲಯಕ್ಕೆ ತಗೆದುಕೊಂಡು ಹೋಗುವುದು ವಾಡಿಕೆ. ಅಲ್ಲಿ ಸೋಮವಾರ ದೇವಾಲಯದ ಪೂಜೆ ನೆರವೇರಿದ ನಂತರ ಭಕ್ತರಿಂದ ಪೂಜೆಗೊಂಡು ಕಾಣಿಕೆ ಸ್ವೀಕರಿಸಿ ವಾಲಗದ ಮೂಲಕ ಮಠಕ್ಕೆ ಕಂಬಿಯ ಆಗಮನವಾಗುವುದು. ಆ ದಿನ ಈ ಮಠದ ಸ್ವಾಮೀಜಿಯವರಿಗೆ ಗೌಡರ ಮನೆಯ ಆತಿಥ್ಯ ಜರುಗುವುದು..

ಇಂದಿಗೂ ಕೂಡ ಕಂಬಿ ಪೂಜೆಗೊಳ್ಳದೇ ಕೆಲವು ಮನೆತನಗಳಲ್ಲಿ ದೇವತಾ ಕಾರ್ಯಗಳಾಗಲಿ ಮದುವೆ ಮುಂಜಿವೆಗಳಾಗಲಿ ಜರುಗುವುದಿಲ್ಲ.ಸಂಬಂಧಪಟ್ಟ ಮನೆತನದವರು ಕಂಬಿಮಠಕ್ಕೆ ಬಂದು ಪೂಜೆಗೆ ಆಮಂತ್ರಣ ಕೊಟ್ಟು ಕಂಬಿಸೇವೆ ಮಾಡುವ ಮೂಲಕ ತಮ್ಮ ಮನೆಯ ಸಂಪ್ರದಾಯದಂತೆ ಇನ್ನುಳಿದ ದೇವತಾ ಕಾರ್ಯಗಳನ್ನು ಜರುಗಿಸುವುದು ತಲತಲಾಂತರದಿಂದ ನಡೆದುಕೊಂಡು ಬಂದ ಸಂಪ್ರದಾಯವಾಗಿದೆ.[15]

---

15. ಸಂದರ್ಶನ, ಶ್ರೀಸೈಲಸ್ವಾಮಿ ಸಂಬಾಳಮಠ, 8–3–2013, ವಯಸ್ಸು – 75

### 3.10 ಆಲೂರುಮಠ

ಮುನವಳ್ಳಿಯಿಂದ ಸವದತ್ತಿ ಕಡೆಗೆ ಹೋಗುವ ಮಾರ್ಗದಲ್ಲಿ ಹಳೆಯ ಸೇತುವೆ ದಾಟಿ ಬಂದರೆ ದಿಬ್ಬದ ಮೇಲೆ ವಿಶಾಲವಾದ ಪ್ರಾಂಗಣ ಹೊಂದಿದ ಆಲೂರ ಮಠ ಇರುವುದು.ಉತ್ತರವಾಹಿನಿಯಲ್ಲಿ ಹರಿಯುತ್ತಿರುವ ಮಲಪ್ರಭಾ ನದಿಯ ತೀರದಲ್ಲಿ ಪೂಜ್ಯ ಶಿವಯೋಗಿಗಳಾದ ಶ್ರೀ ಸಿದ್ದಬಸವ ಮಹಾಸ್ವಾಮಿಗಳು ತಪಗೈದ ಆಲೂರಮಠವು ಶಿಂದೋಗಿ-ಮುನವಳ್ಳಿಗಳ ಸೀಮೆಯನ್ನು ಹೊಂದಿದ ಸ್ಥಳವಾಗಿರುವ ಕಾರಣ ಈ ಮಠವನ್ನು ಎರಡು ಗ್ರಾಮಗಳ ಹೆಸರಿನಿಂದ ಗುರುತಿಸಿರುವರು.

ಈ ಮಠದಲ್ಲಿ ಮಹಾದ್ವಾರವನ್ನು ಪ್ರವೇಶಿಸಿ ಒಳಬಂದರೆ ಆವರಣದಲ್ಲಿ ಲಿಂ.ಸಿದ್ಧಬಸವ ಮಹಾಸ್ವಾಮಿಗಳ ಕರ್ತೃ ಗದ್ದುಗೆ ಇದೆ.ಈ ಮಠವು ಜಡೆಮಠದ ಶಾಖಾಮಠವಾಗಿ ನಂತರ ಶ್ರೀ ಕುಮಾರೇಶ್ವರ ಮಠ ಹಾನಗಲ್ ಇದರ ಶಾಖಾ ಮಠವಾಗಿ ಪರಿವರ್ತನೆಗೊಂಡಿದೆ. ಲಿಂ.ಸದಾಶಿವಸ್ವಾಮಿಗಳ ನಂತರ ಶ್ರೀ ಮ.ನಿ.ಪ್ರ.ಸ್ವಕುಮಾರ ಮಹಾಸ್ವಾಮಿಗಳು ಈ ಮಠದ ಪೀಠಾಧಿಪತಿಗಳಾದರು.

ಶ್ರೀ ಮ.ನಿ.ಪ್ರ.ಸ್ವಕುಮಾರ ಮಹಾಸ್ವಾಮಿಗಳು ಪೀಠಾಧಿಪತಿಗಳಾದ ನಂತರ ಮುನವಳ್ಳಿ ಶಿಂದೋಗಿ ಆಲೂರ ಮಠದಲ್ಲಿ 16-2-1984ರ ಭಾರತಹುಣ್ಣಿಮೆಯಿಂದ ಇವರ ದಿವ್ಯ ಸನ್ನಿಧಿಯಿಂದ ಶಿವಾನುಭವ ಕಾರ್ಯಕ್ರಮಗಳು ಆರಂಭಗೊಂಡು ಪ್ರತಿ ಹುಣ್ಣಿವೆಗೊಂದು ಶಿವಾನುಭವದಂತೆ 18-5-2013ದ ಆಗಿ ಹುಣ್ಣಿಮೆಯವರೆಗೆ 358 ಶಿವಾನುಭವಗೋಷ್ಠಿ ಜರುಗಿವೆ.ಇತ್ತೀಚಿನ ವರ್ಷಗಳಲ್ಲಿ ಸ್ವಾಮೀಜಿಯವರು ಹುಬ್ಬಳ್ಳಿಯ ಮೂರುಸಾವಿರ ಮಠದ ಪೀಠಾಧಿಪತಿಗಳಾದ ನಂತರ ಜಗದ್ಗುರು ಗುರುಸಿದ್ದರಾಜಯೋಗೀಂದ್ರ ಕುಮಾರ ಮಹಾಸ್ವಾಮಿಗಳ ಕಾರ್ಯ ಬಾಹುಳ್ಯದಿಂದಾಗಿ ಶಿವಾನುಭವ ಕಾರ್ಯಕ್ರಮಗಳು ವರ್ಷಕ್ಕೊಂದರಂತೆ ನಡೆಯುತ್ತಿವೆ.

### 3.11 ಸೋಮಶೇಖರ ಮಠ

ಮುನವಳ್ಳಿ ಗ್ರಾಮದಲ್ಲಿ ಹಿರೇ ಅಗಸಿಯಿಂದ ಬಂದರೆ ದಾನಮ್ಮ ದೇವಾಲಯದ ಹತ್ತಿರ ಹಾಗೂ ಸೂಲಕಟ್ಟಿ ಅಗಸಿ ಕಡೆಯಿಂದ ಬಂದರೂ ಕೂಡ ಹತ್ತಿರದ ಸ್ಥಳದಲ್ಲಿ ಇರುವ ಮಠ ಸೋಮಶೇಖರ ಮಠ ಇದು ಅತಿ ಹಳೆಯ ಪುರಾತನ ಮಠ.ಈ ಮಠಕ್ಕೆ ನಿರ್ಮಿಸಿದ ಅಟ್ಟದ ಕಟ್ಟಿಗೆಗಳನ್ನು ಮುಸ್ಲಿಂ ಬಾಂಧವರು ನೀಡಿದ್ದು ಹಿಂದೂ-ಮುಸ್ಲಿಂ ಭಾವೈಕ್ಯತೆಯನ್ನು ಹೊಂದಿದ ಮಠ.ಅನೇಕ ಮಹಿಮಾನ್ವಿತರಿಗೆ ಇಂಬು ಕೊಟ್ಟ ಈ ದಿವ್ಯ ಮಠ ಧರ್ಮ ಸಂಸ್ಕೃತಿಗಳನ್ನು ಜನಮಾನಸದಲ್ಲಿ ತುಂಬುತ್ತ ತನ್ನದೇ ಆದ ವಿಶಿಷ್ಟ ಕಾರ್ಯಗಳನ್ನು ಮಾಡುತ್ತ ಬಂದಿದೆ.

ನಿರ್ವಿಕಲ್ಪ ಸಮಾಧಿಸ್ಥರಾದ ಅನ್ನದಾನೇಶ್ವರ ಮಹಾಸ್ವಾಮಿಗಳು ಈ ಮಠದ ಮೂಲ ಪುರುಷರು. ಪೂಜ್ಯಶ್ರೀ ಅನ್ನದಾನೇಶ್ವರರು. ಪೂಜ್ಯಶ್ರೀ ಬಸವಲಿಂಗ ಸ್ವಾಮಿಗಳು ಭಕ್ತರೇ ನಿಜವಾದ ಆಸ್ತಿ ಎಂಬಂತೆ ಮಠ ಜೀರ್ಣೋದ್ಧಾರ ಮಾಡಬೇಕೆಂಬ ಬಯಕೆಯನ್ನಿಟ್ಟಾಗ ಅನೇಕರು ಸಹಾಯ

ಕಲ್ಪಿಸಿದ್ದು ಅದರಲ್ಲಿ ಬಾಳಿ ಕುಟುಂಬದವರು. ಹುಬ್ಬಳ್ಳಿಯ ಮುಸ್ಲಿಂ ಸಮಾಜದ ಭಕ್ತ ಶ್ರೀ ಮಹಬೂಬಸಾಬ ಹುಸೇನಸಾಬ ಹೆಬಸೂರ ಮತ್ತು ದೇವಣಗಾಂವಿ ಅವರ ಸಹಾಯ ಅದ್ವಿತೀಯವಾದುದು.ಒಟ್ಟು ಹದಿನಾರು ಗುರುಪರಂಪರೆಯನ್ನು ಹೊಂದಿದ ಈ ಮಠದ 16ನೇ ಪೀಠಾಧಿಪತಿಗಳಾದ ಶ್ರೀ ಮುರುಘೇಂದ್ರ ಸ್ವಾಮಿಗಳು ಮಠದ ಸತ್ ಪರಂಪರೆಯನ್ನು ಮುಂದುವರೆಸುವ ಮೂಲಕ ಅನೇಕ ಧಾರ್ಮಿಕ, ಶೈಕ್ಷಣಿಕ, ಸಾಹಿತ್ಯಕ, ಸಾಂಸ್ಕೃತಿಕ, ಸಾಮಾಜಿಕ ಚಟುವಟಿಕೆಯಲ್ಲಿ ತೊಡಗಿ ಜನಮಾನಸದಲ್ಲಿ ನೆಲೆ ನಿಂತಿರುವರು.

ಮುರುಘೇಂದ್ರ ಶ್ರೀಗಳು ಶಿಕ್ಷಣ ಕ್ಷೇತ್ರದಲ್ಲಿ ಆಸಕ್ತಿ ಹೊಂದಿ ಶ್ರೀ ಅನ್ನದಾನೇಶ್ವರ ಸ್ವತಂತ್ರ ಪದವಿಪೂರ್ವ ಮಹಾವಿದ್ಯಾಲಯ. ಭಂಡಾರಹಳ್ಳಿಯಲ್ಲಿ ಪೂರ್ವ ಪ್ರಾಥಮಿಕ ಮತ್ತು ಪ್ರಾಥಮಿಕ ಶಾಲೆ.ಶ್ರೀ ಮುರುಘೇಂದ್ರ ಯೋಗ ವಿದ್ಯಾ ಕೇಂದ್ರವಲ್ಲದೇ ಇನ್ನೂ ಅನೇಕ ಕನಸುಗಳನ್ನು ಹೊತ್ತು ಶಿಕ್ಷಣ ಕ್ಷೇತ್ರದಲ್ಲಿ ಸಾಧನೆಗೈಯುತ್ತಿದ್ದಾರೆ.

### 3.12 ಶ್ರೀ ಶಿರಡಿ ಸಾಯಿಬಾಬಾ ಮಂದಿರ ಮುನವಳ್ಳಿ

ಬೆಳಗಾವಿ ಜಿಲ್ಲೆಯ "ಮುನವಳ್ಳಿ" ಮುನಿಗಳ ನಾಡು ಎಂದು ಐತಿಹಾಸಿಕ ಚರಿತ್ರೆಯಲ್ಲಿ ಉಲ್ಲೇಖಿತವಾದ ಗ್ರಾಮ.ಸವದತ್ತಿಯಿಂದ 16 ಕಿ.ಮೀ ಅಂತರದಲ್ಲಿರುವ ಈ ಊರಲ್ಲಿ ಅನೇಕ ಮಠಮಾನ್ಯಗಳು, ದೇವಾಲಯಗಳು,ಪಕ್ಕದಲ್ಲಿ ಹರಿಯುವ ಮಲಪ್ರಭಾ ನದಿ.ರೇಣುಕಾ ಸಕ್ಕರೆ ಕಾರ್ಖಾನೆಗಳ ಮೂಲಕ ವಾಣಿಜ್ಯ ಕ್ಷೇತ್ರವಾಗಿ ಹೆಸರುವಾಸಿ.ಇಂಥ ಗ್ರಾಮದಲ್ಲಿ ಇತ್ತೀಚಿನ ವರ್ಷಗಳಲ್ಲಿ "ಶಿರಡಿ ಸಾಯಿಬಾಭಾ ಮಂದಿರ " ತಲೆ ಎತ್ತಿನಿಂತು ತನ್ನದೇ ಆದ ಭಕ್ತವೃಂದವನ್ನು ಕೈಬೀಸಿ ಕರೆಯುತ್ತಿದೆ.

ಇತಿಹಾಸದ ಪುಟಗಳಲ್ಲಿ ಯುದ್ದಗಳು,ದೇವಾಲಯಗಳು ರೂಪಗೊಂಡ ಬಗ್ಗೆ ಚರಿತ್ರೆಯನ್ನು ಗ್ರಂಥಗಳಲ್ಲಿ,ಶಾಸನಗಳಲ್ಲಿ ಕಾಣುತ್ತೇವೆ. ಹಾಗೆಯೇ ಇಲ್ಲಿನ ಓರ್ವ ವ್ಯಕ್ತಿ ಸಾಯಿಬಾಬಾನ ಭಕ್ತನಾಗುವ ಮೂಲಕ ದೇವಾಲಯ ಬೆಳೆಯುವ ಮಟ್ಟಿಗೆ ತನ್ನೊಂದಿಗೆ ಯುವಪಡೆಯನ್ನು ಕಟ್ಟಿಕೊಂಡು ಇಂದು ಸಹಸ್ರಾರು ಜನರಿಗೆ ಸಾಯಿಬಾಬಾ ಮಂದಿರ ಮೂಲಕ ಧಾರ್ಮಿಕ ಚಟುವಟಿಕೆಗೆ ನಾಂದಿ ಹಾಡಿದ ಘಟನೆ ನೆನೆದರೆ ನಿಜಕ್ಕೂ ಅಚ್ಚರಿಯಾಗುತ್ತದೆ.

ಸುಮಾರು ಹದಿನೈದು ವರ್ಷಗಳ ಹಿಂದಿನ ಮಾತು ಮುನವಳ್ಳಿಯ ದಿವಂಗತ ವೇದಮೂರ್ತಿ ಕರಬಸಯ್ಯಶಾಸ್ತ್ರೀಯವರ ಹಿರಿಯ ಮಗ ಮಹಾಂತಯ್ಯ.ಕ.ವಿರುಪಯ್ಯನವರಮಠ ಇವರು ತಮ್ಮ ವೈಯುಕ್ತಿಕ ಕಾರ್ಯ ನಿಮಿತ್ಯ ವಾಣಿಜ್ಯ ನಗರಿ ಹುಬ್ಬಳ್ಳಿಗೆ ಹೋಗುವುದು ವಾಡಿಕೆ.ದೇವರೆಂದರೆ ಅಷ್ಟು ಆಸಕ್ತಿ ಇರದ ಇವರು ಹುಬ್ಬಳ್ಳಿಯ ಚಲನಚಿತ್ರ ಮಂದಿರವೊಂದರಲ್ಲಿ ಅಂದು "ಶಿರಡಿ ಸಾಯಿಬಾಬಾ" ಕುರಿತ ಚಲನಚಿತ್ರವೊಂದನ್ನು ವೀಕ್ಷಿಸಿದರು.ಚಿತ್ರಮಂದಿರದಿಂದ ಹೊರಬಂದ ಇವರಿಗೆ "ಬಾಬಾನ" ಮಹಿಮೆ ಎದೆಯಾಂತರದಲ್ಲಿ ಮೂಡಿ ಶರೀರದ ಮೇಲೆ ಧರಿಸಲು "ಬಾಬಾ" ಚಿತ್ರವಿರುವ ಲಾಕೆಟ್ ಏನಾದರೂ ಇಲ್ಲಿ ಸಿಗಬಹುದೇ ಎಂದುಕೊಂಡು ಅಲ್ಲಿನ ಎಲ್ಲ ಅಂಗಡಿಗಳಲ್ಲಿ ಹುಡುಕಾಡಿದರು.ಬಾಬಾ ಚಿತ್ರವಿರುವ ಸರವಾಗಲಿ ಲಾಕೆಟ್ ಆಗಲಿ ಇವರಿಗೆ ಅಂದು ದೊರೆಯಲಿಲ್ಲ.

ಇವರ ಹುಬ್ಬಳ್ಳಿ ಒಡನಾಟ ಇದ್ದೇ ಇತ್ತು.ಮತ್ತೊಂದು ಸಲ ಹುಬ್ಬಳ್ಳಿಗೆ ಬಂದಾಗಲೂ ಹುಡುಕಾಡಿದರು ದೊರೆಯಲಿಲ್ಲ.ಆದರೂ ಇವರಿಗೆ ಬಾಬಾ ಬಗ್ಗೆ ಎಲ್ಲಿಲ್ಲದ ಭಕ್ತಿ ಆರಂಭವಾಯಿತು, ಗ್ರಾಮೀಣ ಪ್ರದೇಶದಲ್ಲಿ ಹಬ್ಬ ಹರಿದಿನ ಬಂದಾಗ ಹೊಸ ಬಟ್ಟೆ ಹೊಲಿಸುವುದು ವಾಡಿಕೆ.ಇವರೂ ಆ ವರ್ಷ ಹಬ್ಬಕ್ಕೆಂದು ಬಟ್ಟೆ ಹೊಲಿಸಿ ಮನೆಗೆ ತಂದು ತಮ್ಮಲ್ಲಿದ್ದ ಹಣವನ್ನು ಪೈಜಾಮ್ ಜೇಬಿನಲ್ಲಿರಿಸಿ ಮಲಗಿದರು.ಆ ದಿನ ವ್ಯವಹಾರದ ದುಡ್ಡು ಎಷ್ಟು ಬಂದಿತ್ತು ಎನ್ನುವುದರ ಪರಿವೆಯೇ ಇಲ್ಲದಂತೆ ನಿದ್ರಾದೇವಿ ಇವರನ್ನು ಆವರಿಸಿ ಬಿಟ್ಟಳು.

ಮರುದಿನ ಹಬ್ಬ ಸ್ನಾನ ಕರ್ಮಾದಿಗಳನ್ನೆಲ್ಲ ಮುಗಿಸಿ ಬಟ್ಟೆ ಧರಿಸಿ ಮನೆಯಿಂದ ಆಚೆ ಬಂದ ಮಹಾಂತಯ್ಯನಿಗೆ ಜೇಬಿನಲ್ಲಿ ದುಡ್ಡು ನೆನಪಾಗಿ ನಿನ್ನೆಯ ದಿನ ವ್ಯವಹಾರ ಎಷ್ಟಾಗಿತ್ತು ಎಂಬುದನ್ನು ಮನೆಗೆ ಹೋಗಿ ಲೆಕ್ಕ ಮಾಡಿ ಜೇಬಲ್ಲಿದ್ದ ಹಣ ತೆಗೆದಿಟ್ಟು ಬರಬೇಕು ಎಂದುಕೊಂಡು ಮನೆಗೆ ನಡೆದರು. ಮನೆತಲುಪಿ ಜೇಬಲ್ಲಿದ್ದ ಹಣ ತೆಗೆಯ ಹೋದಾಗ ಅಚ್ಚರಿಯೊಂದು ಕಾದಿತ್ತು ಇವರ ಹಣದೊಡನೆ ಬಾಬಾ ಚಿತ್ರವಿದ್ದ ಲಾಕೆಟ್ ಇತ್ತು ಆಶ್ಚರ್ಯ ಇದು ತನ್ನ ಜೇಬಿಗೆ ಹೇಗೆ ಬಂತು ಕಳೆದೊಂದು ತಿಂಗಳಿಂದ ಮೈಮೇಲೆ ಧರಿಸಲೆಂದು ಎಲ್ಲೆಲ್ಲಿಯೂ ಹುಡುಕಿದರೂ ಸಿಗದ ಈ ಲಾಕೆಟ್ ಜೇಬಲ್ಲಿ ಬಂದಿದ್ದಾದರೂ ಹೇಗೆ? ಎಂದ ಮನೆಯವರನ್ನೆಲ್ಲ ವಿಚಾರಿಸಿದರು.ಮನೆಯಲ್ಲಿ ಯಾರೂ ಇವರ ಬಟ್ಟೆ ಮುಟ್ಟುವ ಗೋಜಿಗೆ ಹೋಗಿಲ್ಲವೆಂದರು.ಬಟ್ಟೆ ಹೊಲಿದವರ ಬಳಿ ಕೇಳಲು ಅವರೂ ಗೊತ್ತಿಲ್ಲವೆಂದರು.ಬಾಬಾ ನನ್ನ ಬಳಿ ಬಂದಿದ್ದಾನೆಂದುಕೊಂಡು ಅಂದಿನಿಂದ ಹೆಚ್ಚು ಹೆಚ್ಚು ಬಾಬಾ ಚಿಂತನೆಯಲ್ಲಿ ಕಾಲ ಕಳೆಯತೊಡಗಿದರು.ಜೊತೆಗೆ ಶಿರಡಿಗೂ ಪ್ರಯಾಣ ಬೆಳೆಸಿದರು.

ಶಿರಡಿಗೆ ಹೋಗಿ ಬಂದ ಇವರಿಗೆ ಹೊಳೆದದ್ದು ಬಾಬಾ ಹೆಸರಿಗೆ ಮಂದಿರವೊಂದು ನಮ್ಮೂರಲ್ಲಿ ಇರಬೇಕು ಅದಕ್ಕೆ ಅನೇಕ ಭಕ್ತರು ನೆರೆಯಬೇಕು ಎಂಬ ಇಚ್ಚೆ ಆರಂಭವಾಯಿತು. ಅದಕ್ಕೆ ಸ್ಥಳ ಬೇಕು ಎಂದುಕೊಂಡು ಮೊದಲು ತಮಗಿದ್ದ ಹೊಲದಲ್ಲಿ ಪುಟ್ಟದಾದ ದೇವಾಲಯ ನಿರ್ಮಿಸಿ ಅದರಲ್ಲಿ ಶಿರಡಿ ಬಾಬಾನ ಮೂರ್ತಿ ಪ್ರತಿಷ್ಠಾಪಿಸಿ ಅಲ್ಲಿ ಪೂಜಿಸತೊಡಗಿದರು.ನಂತರ ಮುನವಳ್ಳಿ ಗ್ರಾಮದ ಬೆಟ್ಟದ ಮೇಲೆ ಬಂದು ಅಲ್ಲಿರುವ ಜಾಗೆಯನ್ನು ಕಂಡು ತಮ್ಮ ಸ್ನೇಹಿತರಿಗೆ ಇಲ್ಲಿ ಸಾಯಿಮಂದಿರ ನಿರ್ಮಿಸಿದರೆ ಇದೊಂದು ಶಾಂತಿಧಾಮ ಆಗುವುದರಲ್ಲಿ ಸಂದೇಹವೇ ಇಲ್ಲ ಎಂದಾಗ ಇವರ ಸ್ನೇಹಿತರಾದ ಗದಿಗೆಪ್ಪ(ಅಪ್ಪು). ತಾಂದಳೆ, ಕಾಶೀನಾಥಯ್ಯ ಘಟವಾಳಿಮಠ, ಬಸವರಾಜ ಅಂಗಡಿ. ವಿಜಯ ಅಮಠೆ, ಮೊದಲಾದವರು ಈ ದಿಸೆಯಲ್ಲಿ ಯೋಚಿಸಿ ಆ ಜಾಗೆಯನ್ನು ತಮಗೆ ದೊರೆಯುವಂತೆ ಮಾಡಲು ಟ್ರಸ್ಟ ರಚಿಸಿ ಪ್ರಯತ್ನದಲ್ಲಿ ತೊಡಗಿದರು ಸರಕಾರಿ ಗೈರಾಣೆ ಜಾಗೆ ಇವರ ಟ್ರಸ್ಟಗೆ 1993–94 ರಲ್ಲಿ ಎರಡು ಎಕರೆ ದೊರೆಯಿತು. ಆಗ ಇಲ್ಲಿ ಪುಟ್ಟದಾದ ಸಾಯಿ ಮಂದಿರ ನೆಲೆಕಾಣುವಂತಾಯಿತು.ಆ ದೇವಲಯಕ್ಕೆ ಮೂರು ಪೂಟ ಅಳತೆಯ ಮೂರ್ತಿಯನ್ನು ಈಶ್ವರ ಶಿವಪೇಟೆ ನೀಡಿದರು.

6–5–2001 ರಂದು ಈ ಸಾಯಿಮಂದಿರ ಲೋಕಾರ್ಪಣೆಗೊಂಡು ಮುನವಳ್ಳಿಯ ಜನತೆ ನಿತ್ಯವೂ ಈ ಬೆಟ್ಟದ ಮೇಲಿನ ಮಂದಿರಕ್ಕೆ ಬೇಟಿ ನೀಡತೊಡಗಿದರು.ಮೊದ ಮೊದಲು ಇಲ್ಲಿ ಪ್ರತಿ

ದಿನ ನಾಲ್ಕು ಹೊತ್ತು ಪೂಜೆ ಕಾರ್ಯಕ್ರಮ. ಪ್ರತಿ ಗುರುವಾರ ಸಂಜೆ ಭಜನಾ ಕಾರ್ಯಕ್ರಮ ಜರುಗತೊಡಗಿದವು.ನಂತರದ ವರ್ಷಗಳಲ್ಲಿ ಭಕ್ತ ಸಮೂಹ ಹೆಚ್ಚತೊಡಗಿದಂತೆ ನಿರಂತರ ಅಭಿಷೇಕಕ್ಕೆಂದು 1001 ರೂ.ಗಳ ಡಿಪಾಜಿಟ್ ಪಡೆಯುವ ಮೂಲಕ ನಿರಂತರ ಅಭಿಷೇಕ ಜರುಗತೊಡಗಿತು.ಕುಂಕುಮಾರ್ಚನೆ(51 ರೂ),ಅಭಿಷೇಕ (101 ರೂ) ಪೂಜೆಗಳ ಸೇವೆಯೂ ಆರಂಭಗೊಂಡಿತು.ಇಷ್ಟಕ್ಕೇ ಸೀಮಿತವಾಗದೇ ಮುನವಳ್ಳಿಯ ಯುವಕ ಈಶ್ವರ ಅಡಿವೆಪ್ಪ ಶಿವಪೇಟಿ ಈತ ದೇವಾಲಯ ಸ್ಥಾಪನೆಯ ಆರನೆಯ ವಾರ್ಷಿಕೋತ್ಸವ ಅಂಗವಾಗಿ ತನ್ನ ವಿವಾಹದ ಜೊತೆಗೆ ಹನ್ನೊಂದು ಜೋಡಿ ನವವಧುವರರ ವಿವಾಹವನ್ನು ಉಚಿತವಾಗಿ ಈ ದೇವಾಲಯದಲ್ಲಿ ಜರುಗಿಸುವ ಮೂಲಕ ಸರ್ವಧರ್ಮ ಸಮನ್ವಯ ಉಚಿತ ಸಾಮೂಹಿಕ ವಿವಾಹ ಕಾರ್ಯಕ್ಕೆ ಚಾಲನೆ ನೀಡಿದ ಇದರೀ ಮಂದಿರದ ಟ್ರಸ್ಟನ ಯುವಕರಿಗೆ ಮಾದರಿಯಾಯಿತು. ಅದರ ಮರು ವರ್ಷ ಎಲ್ಲ ಯುವ ಗೆಳೆಯರ ಬಳಗ ಸೇರಿ ಪ್ರತಿವರ್ಷ ಸರ್ವಧರ್ಮ ಸಾಮೂಹಿಕ ವಿವಾಹಗಳನ್ನು ವಾರ್ಷಿಕೋತ್ಸವ ಅಂಗವಾಗಿ ಸಾಯಿ ಮಂದಿರದಲ್ಲಿ ಜರುಗಿಸುತ್ತ ಬಂದಿರುವರು.ಇನ್ನುಳಿದಂತೆ ಇಲ್ಲಿ ರಾಮನವಮಿ ಆಚರಿಸಲಾಗುತ್ತದೆ.ಈ ದಿನದಂದು ಪಾಲಕಿ ಉತ್ಸವ,ಭಜನೆ,ತೊಟ್ಟಿಲು ಕಾರ್ಯಕ್ರಮ ಜರುಗಿಸುವರು.[16]

ಸಕಲ ಸೌಕರ್ಯಗಳನ್ನು ಹಂತಹಂತವಾಗಿ ಇಲ್ಲಿ ಬರುವ ಭಕ್ತರಿಗೆ ಒದಗಿಸಬೇಕೆಂಬ ಅನೇಕ ಸಂಕಲ್ಪಿತ ಕಾರ್ಯಗಳೊಂದಿಗೆ ದೇವಾಲಯ ಸೇವಾ ಸಮೀತಿಯ ಯುವಬಳಗ ಕಾರ್ಯನಿರತವಾಗಿದ್ದು ಇದೊಂದು ಮುಂಬರುವ ದಿನಗಳಲ್ಲಿ ಪ್ರವಾಸೀ ತಾಣವಾಗುವುದರಲ್ಲಿ ಸಂದೇಹವಿಲ್ಲ



16. ವೈ. ಬಿ. ಕಡಕೋಳ, ಶಿರಡಿಸಾಯಿಬಾಬಾ ಮಂದಿರ, ಮುನವಳ್ಳಿ, ಸಂಯುಕ್ತ ಕರ್ನಾಟಕ ದಿನಪತ್ರಿಕೆ, 24-4-2012, ಪುಟ - 3

# ಅಧ್ಯಾಯ – ನಾಲ್ಕು
# ಸಾಂಸ್ಕೃತಿಕ ಚಟುವಟಿಕೆಗಳು

## 4.1 ಶ್ರೀಗಳು–ಶಿವಾನುಭವ

ಶಿವನೇ ಪರವಸ್ತುವು,
ತದ್ವ್ಯತಿರಿಕ್ತವಾದುದೆಲ್ಲವೂ ಅಶಿವಾತ್ಮಕವೂ
ಶಿವನು ಅಚ್ಚ ಸುಖದ ನಿಧಿಯು
ನಿಜಾನಂದರೂಪನಾದ ಶಿವನ ಸಾಕ್ಷಾತ್ಕಾರ ಅನುಭವ
ಇಂತಿಪ್ಪ ಶಿವನ ಅನುಭವ(ಶಿವಾನುಭವ)[17]

ನಿಜವಾದ ಸುಖಹೊಂದಿ ಶಾಂತವೆನಿಸುವ ಶಿವಾನುಭವ ಎಂದು ಮಹಾಯೋಗಿಗಳು ಹೇಳಿದ ಈ ಮಾತು ನಿಜಕ್ಕೂ ಸತ್ಯವಾಗಿದೆ. ಜನರಲ್ಲಿ ಇಂದು ಅಧ್ಯಾತ್ಮ ಚಿಂತನೆ ಕಡಿಮೆ ಆಗುತ್ತಿದೆ. ನಾಗಾಲೋಟದಿಂದ ಓಡುತ್ತಿರುವ ಇಂದಿನ ಯುಗದಲ್ಲಿ ಮನುಷ್ಯ ತನ್ನನ್ನು ತಾನು ಅರಿತುಕೊಳ್ಳದೇ ಸಾಗಿದ್ದಾನೆ. ಬುದ್ಧಿವಂತರೂ, ಪ್ರಾಮಾಣಿಕರೂ ದೇಶದ ಸಮಸ್ಯೆಗಳನ್ನು ಬಿಡಿಸುವಲ್ಲಿ ನೆರವಾಗಬೇಕು. ಇಂದಿನ ಸಮಾಜದಲ್ಲಿ ಸ್ವಾಮಿಗಳ ಕ್ಯಾವಿ ಬಲು ದೊಡ್ಡದು. ಪ್ರತಿಯೊಂದು ಸಮಸ್ಯೆಗಳನ್ನು ಅರಿತುಕೊಂಡು ಜನರನ್ನು ಸನ್ಮಾರ್ಗದತ್ತ ಒಯ್ಯಬೇಕು. ರಚನಾತ್ಮಕ ಕಾರ್ಯಗಳನ್ನು ಪ್ರಾರಂಭಿಸಿ ಸೂಕ್ತ ಮಾರ್ಗದರ್ಶನ ನೀಡಬೇಕು.

ಈ ದಿಸೆಯಲ್ಲಿ ಶಿಂದೋಗಿ–ಮುನವಳ್ಳಿ ಆಲೂರ ಮಠದಲ್ಲಿ ಪ್ರತಿ ಹುಣ್ಣಿಮೆಯಂದು ಜರುಗುವ ಶಿವಾನುಭವ ಪರಂಪರೆ ಪ್ರಚಲಿತ–ವಿದ್ಯಮಾನದಲ್ಲಿ ಹೊಸ ರೀತಿಯ ಕಾರ್ಯವೆಸಗುತ್ತ ಬಂದಿದ್ದು ಜಗದ್ಗುರು ಗುರುಸಿದ್ದರಾಜಯೋಗೀಂದ್ರ ಕುಮಾರ ಮಹಾಸ್ವಾಮಿಗಳ ಹಾಗೂ ಮುನವಳ್ಳಿ, ಶಿಂದೋಗಿ, ಎಕ್ಕೇರಿ, ಅರಟಗಲ್, ಹಿರೂರ, ಹಳ್ಳೂರ, ಭಂಡಾರಹಳ್ಳಿ ಸುತ್ತಮುತ್ತಲಿನ ಗ್ರಾಮದ ಜನರ, ಹಿರಿಯರ ಸಹಕಾರದಿಂದ ಇಂದು ನಶಿಸುತ್ತಿರುವ ಮೌಲ್ಯಗಳ ರಕ್ಷಣೆಯ ಗುರುತರ ಜವಾಬ್ದಾರಿಯನ್ನು "ಶಿವಾನುಭವ" ಕಾರ್ಯಕ್ರಮಗಳು ಮಾಡುತ್ತಿವೆಯೆಂದರೆ ತಪ್ಪಾಗಲಾರದು.

ಮೇ–18,2000 ರಂದು ಗುರುವಾರ ಆಗಿ ಹುಣ್ಣಿಮೆಯಂದು ಜರುಗಿದ 202ನೇಯ ಶಿವಾನುಭವ ಕಾರ್ಯಕ್ರಮದಲ್ಲಿ ಇನ್ನೂರು ಶಿವಾನುಭವಗಳು ಸ್ಮರಣ ಸಂಚಿಕೆ ಹೊರತಂದಿದ್ದು ಇಂದಿಗೂ ಕೂಡ 358ನೆಯ ಶಿವಾನುಭವ(ಮೇ.2013) ಜರುಗಿಸಿಕೊಂಡು ಬರುತ್ತಿರುವುದು ಶ್ಲಾಘನೀಯವಾದ ಕಾರ್ಯವಾಗಿದೆ.

ಬಸವಣ್ಣನವರ ಕಾಲಕ್ಕೆ ಶಿವಾನುಭವಿಗಳು ಅನುಭವದ ವಿನಿಮಯಕ್ಕೆ ಸಾಧನೆಯಲ್ಲಿ ಮುಂದುವರೆದಾಗ ಎದುರಾಗುವ ಸಂದೇಹಗಳನ್ನು ನಿವಾರಿಸಿಕೊಳ್ಳುವುದಕ್ಕಾಗಿ ಒಂದೆಡೆ ಸೇರುತ್ತಿದ್ದರು.

---

17. ವೈ. ಬಿ. ಕಡಕೋಳ, 'ಇನ್ನೂರು ಶಿವಾನುಭವಗಳು' ಸಮರಣ ಸಂಚಿಕೆ, ಪುಟ – 52, 2000

ಆ ಸ್ಥಳವೇ"ಅನುಭವ ಮಂಟಪ"ವೆಂದು ಕರೆಯಲ್ಪಟ್ಟಿದೆ. ಅದೊಂದು ಅಧ್ಯಾತ್ಮಿಕ ಸಂಸ್ಥೆ. ಶಿವಾನುಭವ ಸಭೆಗೆ"ಪುರಾತರ ಸಮಿತಿ", "ಓಲಗ", "ಒಡ್ಡೋಲಗ","ಅನುಭಾವಗೋಷ್ಠಿ", ತತ್ವಗೋಷ್ಠಿ ಇತ್ಯಾದಿ ಪರ್ಯಾಯ ಪದಗಳು ವೀರಶೈವ ಸಾಹಿತ್ಯದಲ್ಲಿ ಪ್ರಯೋಗಗೊಂಡಿವೆ.

ಅನುಭವ–ಅನುಭಾವ–ಅನುಭೂತಿ ಇವೆಲ್ಲ ಮೀರಿನಿಂದುದು ಶಿವಾನುಭವ. ಅದು ಇಂದ್ರಿಯಾತೀತ, ಪವಿತ್ರ ಹೃದಯಕ್ಕೆ ಗೋಚರವಾಗುವ ಅನುಭವ. ಶಿವಾನುಭವದಿಂದ ಮಾನವ ಮಹಂತನಾಗಬಹುದು. ಅನುಭವದ ಸಾಕಾರ ಮೂರ್ತಿಯಾಗಿ, ಅನುಭಾವಿಯಾಗಿ ಬದುಕು ಹಸನು ಮಾಡಿಕೊಳ್ಳಲು ಶಿವಾನುಭವ ನಡೆಸಬೇಕು.

ಶಿವಶರಣರ ವಚನಗಳಲ್ಲಿ "ಅನುಭವ" "ಅನುಭಾವ"ವೆಂಬ ಪದಗಳು ಸಾಮರಸ್ಯ ಸಂಬಂಧವನ್ನು ಸೂಚಿಸುತ್ತವೆ.

ಅಯ್ಯಾ ನಿಮ್ಮ ಅನುಭಾವಿಗಳ ಸಂಗದಿಂದ
ಎನ್ನ ತನು ಶುದ್ಧವಾಯಿತ್ತು.
ಅಯ್ಯಾನಿಮ್ಮ ಅನುಭಾವಿಗಳ ಸಂಗದಿಂದ
ಎನ್ನ ಮನ ಶುದ್ಧವಾಯಿತ್ತು.
ಅಯ್ಯಾ ನಿಮ್ಮ ಅನುಭಾವಿಗಳ ನೊರೆ ನೊರೆದು
ಆಗ ಮಾಡಿದ ಕಾರಣ
ಚೆನ್ನಮಲ್ಲಿಕಾರ್ಜುನ ನಿಮಗಾನುಡಿತೊಡುಗೆಯಾದೆನು.

ಹಾಗೂ

ಅನುಭಾವವಿಲ್ಲದ ಭಕ್ತಿ ಅನುವಿಂಗೆ ಬಾರದು
ಅನುಭಾವವಿಲ್ಲದ ಲಿಂಗ ಸಮರಸ ಸುಖವನೀಯದು
ಅನುಭಾವವಿಲ್ಲದ ಪ್ರಸಾದ ಪರಿಣಾಮವ ಕೊಡದು
ಅನುಭಾವವಿಲ್ಲದೆ ಅರಿಯಬಾರದು
ತನ್ನಲ್ಲಿ ತಾ ಸನ್ನಿಹಿತವುಳ್ಳರೆ
ಶಿವಶರಣರ ಸಂಗ ವೇತಕ್ಕೆನಲುಂಟೆ?
ಕೂಡಲ ಸಂಗಮದೇವಯ್ಯ, ನಿಮ್ಮ ಅನುಭಾವ
ಮಾತಿನ ಮಥನವೆನ್ನಬಹುದೇ?

ಈ ಮೇಲಿನ ವಚನಗಳನ್ನು ಸೂಕ್ಷ್ಮವಾಗಿ ಅವಲೋಕಿಸಿದರೆ ಇಲ್ಲಿ "ಅನುಭಾವಿಗಳ ಸಂಗ" "ಅನುಭಾವ" ಇವು ಶಿವಾನುಭವದ ಹಿರಿಮೆಯನ್ನು ಎತ್ತಿ ತೋರಿಸುತ್ತವೆ. ನಿಜಗುಣ ಶಿವಯೋಗಿಗಳು ಕೂಡ ಶಿವಾನುಭವ ನಡೆಸುತ್ತಿದ್ದರು. ಅಲ್ಲಿ ಶಿವಾನುಭವ ಚಟುವಟಿಕೆಯಿಂದ ಸಾಹಿತ್ಯ, ಕಲೆ, ಮಾನವೀಯ ಮೌಲ್ಯಗಳು ಊರ್ಜಿತಾವಸ್ಥೆಯ್ನನು ಪಡೆದುಕೊಂಡಿದ್ದವು.

ಧಾರವಾಡದ ಮೃತ್ಯುಂಜಯ ಅಪ್ಪಗಳು ಶಿವಾನುಭವ ಸಂಸ್ಥೆ ಸ್ಥಾಪಿಸಿದರು. ನಾಡಿನಲ್ಲಿಯ ಅನುಭಾವಿಗಳನ್ನು ತತ್ವವೇತ್ತರನ್ನು ತಮ್ಮ ಶ್ರೀ ಮಠಕ್ಕೆ ಕರೆಯಿಸಿಕೊಂಡು ಅವರಿಂದ ಶಿವಾನುಭವ ಬೋಧಿಸಿದರು. ಪಠ್ಯಕ್ರಮ ನಿರ್ಮಿಸಿ ಗ್ರಂಥ ಬರೆಸಿದರು. ತರಭೇತಿ ವರ್ಗಗಳನ್ನು ನಡೆಸಿದರು. ತರಭೇತಿಗೊಂಡ ಮೇಲೆ ಉತ್ತೀರ್ಣರಾದವರಿಗೆ ಪ್ರಮಾಣ ಪತ್ರ ನೀಡಿದರು. ಗದುಗಿನ ತೋಂಟದ ಶ್ರೀಗಳು ಪ್ರತಿ ವಾರಕ್ಕೊಂದು ಶಿವಾನುಭವ ಜರುಗಿಸುತ್ತ ಬಂದಿದ್ದಾರೆ.

ಇಂಥ"ಶಿವಾನುಭವಗಳು" ಮುನವಳ್ಳಿ ಶಿಂದೋಗಿ ಆಲೂರ ಮಠದಲ್ಲಿ 16–2–1984ರ ಭಾರತಹುಣ್ಣಿಮೆಯಿಂದ ಜಗದ್ಗುರು ಗುರುಸಿದ್ದರಾಜಯೋಗೀಂದ್ರ ಕುಮಾರ ಮಹಾಸ್ವಾಮಿಗಳ ದಿವ್ಯ ಸನ್ನಿಧಿಯಿಂದ ಆರಂಭಗೊಂಡು ಪ್ರತಿ ಹುಣ್ಣಿವೆಗೊಂದು ಶಿವಾನುಭವದಂತೆ 18–5–2013ದ ಆಗಿ ಹುಣ್ಣಿಮೆಯವರೆಗೆ 358 ಶಿವಾನುಭವಗೋಷ್ಠಿ ಜರುಗಿವೆ.ಇತ್ತೀಚಿನ ವರ್ಷಗಳಲ್ಲಿ ಜಗದ್ಗುರುಗಳ ಕಾರ್ಯಬಾಹುಳ್ಯದಿಂದಾಗಿ ಶಿವಾನುಭವ ಕಾರ್ಯಕ್ರಮಗಳು ವರ್ಷಕ್ಕೊಂದರಂತೆ ನಡೆಯುತ್ತಿವೆ. ಇಲ್ಲಿ ಧಾರ್ಮಿಕ ಉಪನ್ಯಾಸಗಳು ಜರುಗುತ್ತಿದ್ದು ನಾಡಿನ ಕಲೆ,ಸಾಹಿತ್ಯ, ಸಂಗೀತ.ಶಿಕ್ಷಣ, ಧಾರ್ಮಿಕ,ಸಾಮಾಜಿಕ, ಆರ್ಥಿಕ,ರಾಜಕೀಯ,ಹೀಗೆ ವಿವಿಧ ರಂಗಗಳಲ್ಲಿ ಸೇವೆ ಸಲ್ಲಿಸಿದ ಮಹನೀಯರ ಸತ್ಕಾರಗಳು ಕೂಡ ಈ ಸಂದರ್ಭದಲ್ಲಿ ಜರುಗಿವೆ ಕೂಡ.ಪ್ರತಿ ಶಿವಾನುಭವದ ದಿನ ಅನ್ನದಾಸೋಹ ಜರುಗುತ್ತಿರುವುದು ಶ್ಲಾಘನೀಯ.

**4.2 ಮುನಿಪುರಾದೀಶ ಮುರುಘೇಂದ್ರ ಮಹಾಸ್ವಾಮಿಗಳು**

ಆರೇನೆಂದಡೂ ಓರಂತಿಪ್ಪುದೇ ಸಮತೆ,ಆರು ಜರಿದರೂ
ಅವರೆನ್ನ ಮನದ ಕಾಳಿಕೆಯ ಕಳೆದರೆಂಬುದೇ ಸಮತೆ
ಆರು ಸ್ತುತ್ಯ ಮಾಡಿದರೂ ಅವರೆನ್ನ ಜನ್ಮಜನ್ಮದ ಹಗೆಗಳೆಂಬುದೇ ಸಮತೆ
ಇಂತಿದು ಗುರುಕಾರುಣ್ಯ,ಮನ ವಚನ ಕಾಯದಲ್ಲಿ ಅವಿತತವಿಲ್ಲದಿರ್ದಡೆ
ಕಪಿಲ ಸಿದ್ದಮಲ್ಲಿಕಾರ್ಜುನಾ,ನಿನ್ನವರ ನೀನೆಂಬುದೇ ಸಮತೆ.[18]

ಎಂಬ ಶಿವಯೋಗಿ ಸಿದ್ದರಾಮನ ಸಮತಾದೃಷ್ಟಿಯ ವಚನವನ್ನು ನೆನೆಯುತ್ತ ಮುನವಳ್ಳಿಯ ನಡೆದಾಡುವ ದೇವರೆಂದೇ ಜನರಲ್ಲಿ ಬಿಂಬಿತವಾದ ಮುರುಘೇಂದ್ರ ಮಹಾಸ್ವಾಮಿಗಳ ಬದುಕು ಕೂಡ ಕಾಯಕ ಯೋಗಿಗಳಾಗಿ,ಶ್ರೀ ಮಠದ ಹೆಸರನ್ನು ಇಂದು ಜನಮಾನಸದಲ್ಲಿ ಚಿರಸ್ಥಾಯಿಗೊಳಿಸುವ ಜೊತೆಗೆ ಮುನವಳ್ಳಿ ಮುನಿಗಳ ಹಳ್ಳಿ ಎಂಬ ಪರಂಪರೆಯನ್ನು ಉಳಿಸಿಕೊಂಡು ಬರುವಲ್ಲಿ ತಮ್ಮದೇ ಆದ ಕಾಯಕದಲ್ಲಿ ಬದುಕುತ್ತಿರುವ ಇತ್ತೀಚಿಗಷ್ಟೇ ಮುರುಘೇಂದ್ರ ಶ್ರೀಗಳು ಮುನಿಪುರಾಧೀಶರರು ಎಂಬ ಪುಟ್ಟ ಗ್ರಂಥವನ್ನು ಶ್ರೀಗಳ ಕಾರ್ಯವನ್ನು ನೆನೆದು ಮಠದಲ್ಲಿ ಬಿಡುಗಡೆಗೊಳಿಸಲಾಯಿತು.

ಮುನವಳ್ಳಿ ಸೋಮಶೇಖರ ಮಠಕ್ಕೆ ಬಹುದೊಡ್ಡ ಪರಂಪರೆಯಿದೆ.ಈ ಮಠಕ್ಕೆ 15 ಜನ ಮಹಾಸ್ವಾಮಿಗಳು ಆಗಿ ಹೋಗಿದ್ದಾರೆ.ಇಂತಹ ಸತ್ಪರಂಪರೆ ಹೊಂದಿದ ಮಠಕ್ಕೆ 16 ನೇ

18. ವೈ. ಬಿ. ಕಡಕೋಳ, 'ಮುನಿಪುರಾಧೀಶ ಮುರುಘೇಂದ್ರ ಮಹಾಸ್ವಾಮಿಗಳು' (ಬಸವವಾಣಿ ಮಾಸಪತ್ರಿಕೆ, ಮೇ–2012, ಪು. 9)

ಪೀಠಾಧಿಕಾರಿಗಳಾಗಿ ಬಂದವರು ಶ್ರೀ ಮ.ನಿ.ಪ್ರ.ಮುರುಘೇಂದ್ರ ಸ್ವಾಮಿಗಳು,ಮಠಕ್ಕೆ ಬಂದ ಕೆಲವೇ ದಿನಗಳಲ್ಲಿ ಭಕ್ತರ ಪ್ರೀತಿಯನ್ನು ಸಂಪಾದಿಸಿ ತಮ್ಮ ಪೂಜಾಬಲ,ಹಾಗೂ ಕಾಯಕದಿಂದ ಮುನವಳ್ಳಿಯ ನಡೆದಾಡುವ ದೇವರೆಂದು ಜನರಿಂದ ಬಿಂಬಿತವಾದರು.ಮುನವಳ್ಳಿಯ ಸುತ್ತಮುತ್ತಲಿನ ಅನೇಕ ಸ್ಥಳಗಳಲ್ಲಿ ಹಾಗೂ ಮುನವಳ್ಳಿಯಲ್ಲಿ ಯಾವುದೇ ಕಾರ್ಯಕ್ರಮಗಳಿರಲಿ,ಯಾವುದೇ ಜಾತಿ ಜನಾಂಗದ ಸಭೆ ಸಮಾರಂಭಗಳಿರಲಿ ಅಲ್ಲಿ ಪೂಜ್ಯರ ಸಾನಿಧ್ಯೆ ಇದ್ದದ್ದೇ,ಅಷ್ಟರಮಟ್ಟಿಗೆ ಇಂದು ಜನಮಾನಸದಲ್ಲಿ ಚಿರಸ್ಥಾಯಿಯಾಗಿರುವರು ಎಂದರೆ ಅತಿಶಯೋಕ್ತಿಯೇನಲ್ಲ.

ಇಂತಹ ಶ್ರೀಗಳ ಕಿರುಪರಿಚಯದ ನೋಟ .ಮುರುಘೇಂದ್ರ ಶರಣರು ಮೂಲತ:ಸವದತ್ತಿ ತಾಲೂಕಿನ ಕುಶಲಾಪುರ ಎಂಬ ಗ್ರಾಮದ ಶರಣ ದಂಪತಿಗಳಾದ ಲಿಂ.ವೀರಯ್ಯಾ ಮತ್ತು ಸಿದ್ದಮ್ಮನವರ ಉದರದಲ್ಲಿ 10 ಜೂನ್ 1974 ರಲ್ಲಿ ಜನ್ಮ ತಾಳಿದರು.ಇವರ ಮನೆಯಲ್ಲಿ ಮೊದಲಿನಿಂದಲೂ ಅಥಣಿಯ ಮುರುಘೇಂದ್ರ ಸ್ವಾಮಿಗಳ ಬಗ್ಗೆ ಅಪಾರ ಭಕ್ತಿ,ಮಮತೆ, ಹೀಗಾಗಿ ಇವರಿಗೆ ಮುರುಘೇಂದ್ರ ಎಂಬ ನಾಮಕರಣ ಮಾಡುವ ಮೂಲಕ ಇವರ ಮಾತಾಪಿತರು ಮುರುಘೇಂದ್ರರ ಹೆಸರು ಕರೆದರು. ಬೆಳೆಯ ಸಿರಿ ಮೊಳಕೆಯಲ್ಲಿ ಎಂಬಂತೆ ಬಾಲ್ಯದಲ್ಲಿನ ಇವರ ತೇಜಸ್ಸು ಮುಂದೊಂದು ದಿನ ಈ ವ್ಯಕ್ತಿ ಸಮಾಜದಲ್ಲಿ ಹೆಸರುವಾಸಿಯಾಗುತ್ತಾನೆ ಎಂಬಂತಿತ್ತು.

ಪ್ರಾಥಮಿಕ ಶಿಕ್ಷಣವನ್ನು ಸ್ವಗ್ರಾಮದಲ್ಲಿ ಕಲಿತು ಮುಂದೆ ಪ್ರೌಢ ಶಿಕ್ಷಣವನ್ನು ಯಕ್ಕುಂಡಿ ಗ್ರಾಮದಲ್ಲಿ ಪೂರೈಸಿದರು.ಬೆಳಗಾವಿಯ ಶ್ರೀ ಶಿವಬಸವ ಮಹಾಸ್ವಾಮಿಗಳು ಹಾಗೂ ಯಕ್ಕುಂಡಿಯ ಶ್ರೀ ವಿರುಪಾಕ್ಷ ಪೂಜ್ಯರ ಅನುಗ್ರಹದ ಮೇರೆಗೆ ಮತ್ತು ಗ್ರಾಮದ ಗುರುಹಿರಿಯರು ಹಿತೈಷಿಗಳು ಇವರನ್ನು ಧಾರ್ಮಿಕ ಶಿಕ್ಷಣ ಪಡೆಯಲು ಶಿವಯೋಗ ಮಂದಿರಕ್ಕೆ ಕಳುಹಿಸಿದರು. ಶಿವಯೋಗಮಂದಿರದ ಪ್ರಭೆಯಲ್ಲಿ ಮಿಂದ ಇವರು ವಚನ ಸಾಹಿತ್ಯದ ದೀರ್ಘ ಅಧ್ಯಯನ,ಶಾಸ್ತ್ರ,ಅಧ್ಯಾತ್ಮ ಯೋಗ,ಸಂಸ್ಕೃತವನ್ನು ಸತತ ಮೂರು ವರ್ಷಗಳವರೆಗೆ ಅಧ್ಯಯನಗೈದರು.

ಇನ್ನೂ ಹೆಚ್ಚಿನ ಅಧ್ಯಯನ ಮಾಡಬೇಕೆಂಬ ಹಂಬಲದಿಂದ ಕಮತಗಿಯ ಪೂಜ್ಯರಾದ ಶ್ರೀ ಹುಚ್ಚೇಶ್ವರ ಸ್ವಾಮಿಗಳ ಹಾಗೂ ಅಲ್ಲಿಯ ಭಕ್ತರ ಬಳಿ ಬಂದಾಗ ಮೈಸೂರಿನ ಸುತ್ತೂರು ಮಠಕ್ಕೆ ಸಂಸ್ಕೃತದಲ್ಲಿ ಹೆಚ್ಚಿನ ವ್ಯಾಸಾಂಗ ಪಡೆಯಲು ಕಳುಹಿಸಿದರು, ಇಲ್ಲಿಯ ಜೆ.ಎಸ್.ಎಸ್, ಗುರುಕುಲ ವಿದ್ಯಾಪೀಠದಲ್ಲಿದ್ದುಕೊಂಡು ಶಕ್ತಿವಿಶಿಷ್ಟಾದ್ವೈತವನ್ನು ಮಹಾರಾಜ ಸಂಸ್ಕೃತ ಮಹಾವಿದ್ಯಾಲಯದಲ್ಲಿ ಪೂರೈಸಿದರು.ಸುತ್ತೂರು ಮಠ ಅಧ್ಯಾತ್ಮಿಕ ಒಲವಿನ ತಾಣ.ಮೈಸೂರು ರಾಜ ಮನೆತನದ ಗುರುಗಳಾದ ಲಿಂ.ಶಿವರಾತ್ರೀಶ್ವರರ ಭಕ್ತಿಯ ಬಿಲ್ವವೇ ಈ ಮಠ.ಇಂತಹ ಮಠದಲ್ಲಿ ಜ್ಞಾನ ಸಂಪಾದನೆ ಕೂಡ ವಿಶಿಷ್ಟವೇ ಅದು ಮುರುಘೇಂದ್ರಸ್ವಾಮೀಜಿಯವರಿಗೆ ಸಿದ್ದಿಸುವ ಜೊತೆಗೆ ಜ್ಞಾನದ ಪ್ರಸರಣಕ್ಕೂ ಪ್ರೇರಣೆ ನೀಡಿತು,

1999 ನೇ ಜನೇವರಿ 24 ರಂದು ಮುನವಳ್ಳಿಯ ಸೋಮಶೇಖರ ಮಠಕ್ಕೆ ಪರಮಪೂಜ್ಯ ಹಾನಗಲ್ಲ ಕುಮಾರ ಸ್ವಾಮಿಗಳ ಅಪ್ಪಣೆಯ ಮೇರೆಗೆ ಹಾಗೂ ಇದೇ ಮಠದ 15 ನೆಯ

ಪೀಠಾಧಿಪತಿಗಳಾಗಿದ್ದ ಶ್ರೀ ಚನ್ನಬಸವ ಮಹಾಸ್ವಾಮಿಗಳ ಸದಿಚ್ಛೆಯ ಮೇರೆಗೆ ಹಾನಗಲ್ಲ ಪರಮಪೂಜ್ಯರಾದ ಶ್ರೀ ಕುಮಾರ ಸ್ವಾಮಿಗಳು ಅಂದರೆ ಈಗಿನ ಹುಬ್ಬಳ್ಳಿಯ ಮೂರುಸಾವಿರ ಮಠದ ಜಗದ್ಗುರುಗಳಾದ ಶ್ರೀಮನ್ ಮಹಾರಾಜ ನಿರಂಜನ ಜಗದ್ಗುರು ಗುರುಸಿದ್ದ ರಾಜಯೋಗೀಂದ್ರ ಮಹಾಸ್ವಾಮಿಗಳ ಅವರಿಂದ ಅಧಿಕಾರ ಪಡೆದು ಮುನವಳ್ಳಿಯ ಸೋಮಶೇಖರ ಮಠಕ್ಕೆ ಪೀಠಾಧಿಪತಿಗಳಾದರು.

ಸತ್ಪರಂಪರೆ ಹೊಂದಿದ ಶ್ರೀಮಠಕ್ಕೆ ಆಗಮಿಸಿದ ಸ್ವಾಮೀಜಿ ಗ್ರಾಮದ ಎಲ್ಲ ಹಿರಿಯರು,ಯುವಕರು,ಮಕ್ಕಳು,ಅಕ್ಕನ ಬಳಗದ ಮಾತೆಯರು ಹೀಗೆ ಎಲ್ಲರನ್ನು ಗಮನಕ್ಕೆ ತೆಗೆದುಕೊಂಡು ಕಾಯಕ ದಾಸೋಹದ ಅರಿವು ಮೂಡಿಸುವ ಜೊತೆಗೆ ಯಾವ ಜಾತಿ ಜಂಜಾಟಕ್ಕೆ ಸಿಲುಕದೇ ಎಲ್ಲ ಸಮಾಜದವರೊಂದಿಗೆ ಬೆರೆತು ಸಮಾಜದ ಸ್ವಾಸ್ಥ್ಯ ಕಾಪಾಡುವ ನಿಟ್ಟಿನಲ್ಲಿ ಜನಹಿತ ಧಾರ್ಮಿಕ ಚಿಂತನೆಗಳನ್ನು ಮಾಡುತ್ತ ಮುನವಳ್ಳಿಯಲ್ಲಿ ಶ್ರೀ ಮುರುಘರಾಜೇಂದ್ರ ಯೋಗ ವಿದ್ಯಾ ಕೇಂದ್ರ,ಶ್ರೀ ಅನ್ನದಾನೇಶ್ವರ ಸ್ವತಂತ್ರಪೂರ್ವ ಮಹಾವಿದ್ಯಾಲಯ,ಶ್ರೀ ಅನ್ನದಾನೇಶ್ವರ ಗ್ರಾಮೀಣ ಅಭಿವೃದ್ಧಿ ಸಂಘ,ಶ್ರೀ ಅಕ್ಕನ ಬಳಗ,ಶ್ರೀ ಶರಣ ಬಳಗ,ಬೈಲಹೊಂಗಲದಲ್ಲಿ ಶ್ರೀ ವಿರುಪಾಕ್ಷ ಸ್ವಾಮಿ ವಿದ್ಯಾರ್ಥಿ ನಿಲಯ,ಭಂಡಾರಹಳ್ಳಿಯಲ್ಲಿ ಶ್ರೀಮತಿ ಅಂದಾನೆಮ್ಮ ಯಕ್ಕುಂಡಿಮಠ ಕನ್ನಡ ಪೂರ್ವ ಪ್ರಾಥಮಿಕ ಹಾಗೂ ಪ್ರಾಥಮಿಕ ಶಾಲೆ ಸ್ಥಾಪಿಸುವ ಮೂಲಕ ಅನ್ನದಾಸೋಹ ಜ್ಞಾನದಾಸೋಹ ಕಾರ್ಯಗಳಿಗೆ ಚಾಲನೆ ನೀಡಿರುವರು.

"ಮಠದಿಂದ ಘಟವಲ್ಲ ಘಟದಿಂದ ಮಠ" ಎಂಬ ಮಾತಿಗೆ ನಿದರ್ಶನರಾದ ಸ್ವಾಮೀಜಿಯವರು ಪ್ರತಿವರ್ಷ ಶ್ರಾವಣ ಮಾಸದಲ್ಲಿ ಬೆಳಗಿನ ಜಾವ ಧಾರ್ಮಿಕ ಪಥಸಂಚಲನ ನಡೆಸುವ ಪರಂಪೆಗೆ ನಾಂದಿ ಹಾಡಿದ್ದು ಈ ಸಂದರ್ಭದಲ್ಲಿ " ಓಂ ಶ್ರೀ ಗುರು ಬಸವಲಿಂಗಾಯ ನಮಃ" ಎಂಬ ಬಸವ ಮಂತ್ರದಧ್ವನಿ ಎಲ್ಲೆಡೆ ಮೊಳಗುವಂತೆ ಮಾಡಿರುವರು.ತಾಲೂಕಿನಾದ್ಯಂತ ಧಾರ್ಮಿಕ ಪ್ರವಚನಗಳು,ಸಾಂಸ್ಕೃತಿಕ ಕಾರ್ಯಕ್ರಮಗಳಲ್ಲಿ ಪಾಲ್ಗೊಳ್ಳುವ ಜೊತೆಗೆ ಮುನವಳ್ಳಿಯ ನಾಡಹಬ್ಬ, ಹಾಗೂ ಜೇವೂರ ಗುರುಗಳ ಪ್ರತಿಷ್ಠಾನ ಸಮಾರಂಭಗಳಲ್ಲಿ ಅಲ್ಲದೇ ನಾಡಿನೆಲ್ಲೆಡೆ ಕ್ಷಾಮ.ಭೂಕಂಪ,ನೆರೆಸಂತ್ರಸ್ತ ಘಟನೆಗಳು ನಡೆದಾಗ ಗ್ರಾಮದ ಹಿರಿಯರು ಯುವಕರೊಡನೆ ಸೇರಿ ಸಂತ್ರಸ್ತ ಜನರಿಗೆ ನೆರವು ನೀಡುವ ಕಾರ್ಯಕ್ಕೆ ಧಾನ್ಯ,ಹಣ ಸಂಗ್ರಹಿಸಿ ನೀಡುವ ಜೊತೆಗೆ ಜನಪರ ಕಾಳಜಿಯುಳ್ಳ ಕಾರ್ಯಗಳನ್ನು ಸಂಘಟಿಸುತ್ತ ನಾಡು ನುಡಿಯ ಬಿತ್ತರಿಸುವಲ್ಲಿ ಕಾಳಜಿ ವಹಿಸಿರುವರು.

ಪ್ರತಿ ವರ್ಷ ವರವಿಕೊಳ್ಳ ಸುಕ್ಷೇತ್ರದಲ್ಲಿ ಜನಸಾಮಾನ್ಯರೊಡನೆ ಶರಣರು ಎಂಬ ತತ್ವದಡಿಯಲ್ಲಿ ಇಷ್ಟಲಿಂಗಪೂಜಾ ವಿಧಾನ,ಅದರ ಮಹಿಮೆ ಹಾಗೂ ಕಾಯಕನಿಷ್ಠೆ ಕುರಿತ ಕಾರ್ಯದಲ್ಲಿ ತೊಡಗಿರುವರು. ಶ್ರೀಮಠದಲ್ಲಿ ಅನೇಕ ಕಾರ್ಯಕ್ರಮಗಳನ್ನು ಹಮ್ಮಿಕೊಳ್ಳುವ ಜೊತೆಗೆ ಪ್ರತಿವರ್ಷ ತಮ್ಮ ಹಿಂದಿನ ಗುರುಗಳಾದ ಲಿಂ.ಬಸವಲಿಂಗ ಮಹಾಸ್ವಾಮಿಗಳವರ ಪುಣ್ಯಸ್ಮರಣೋತ್ಸವವನ್ನು ಹಮ್ಮಿಕೊಳ್ಳುತ್ತ ಬಂದಿದ್ದು ಮುನವಳ್ಳಿಯ ಸಕಲ ಸದ್ಭಕ್ತರು,ಶಾಸಕರು,ಸಂಸದರ ಸಹಾಯ ಸಹಕಾರಗಳಿಂದ ಅನ್ನದಾನೇಶ್ವರ ದಾಸೋಹ ಭವನ ನಿರ್ಮಿಸಿದ್ದು.ಶ್ರೀ ಮಠದಲ್ಲಿನ ಕರ್ತೃ ಗದ್ದುಗೆಗೆ ನಿತ್ಯವೂ

ಪೂಜೆ,ಅಭಿಷೇಕ,ಬಿಲ್ವಾರ್ಚನೆ ಕಾರ್ಯಗಳು ನಡೆಯುವಂತೆ ಮಾಡಿದ್ದು ಪೂಜಾನಿಷ್ಠರಾಗಿ ವೀರಶೈವ ತತ್ವದ ಪ್ರಕಾರ ಅಷ್ಟಾವರಣ.ಪಂಚಾಚಾರಗಳನ್ನು ಅಳವಡಿಸಿಕೊಂಡು ಇವುಗಳನ್ನು ಜನರಲ್ಲಿ ಬಿತ್ತಲು ಪ್ರಯತ್ನಿಸುತ್ತಿರುವರು.

"ನಡೆಯೊಳಗೆ ನುಡಿತುಂಬಿ,ನುಡಿಯೊಳಗೆ ನಡೆ ತುಂಬಿ
ನಡೆ ನುಡಿ ಎರಡನು ಪರಿಪೂರ್ಣ ತುಂಬಿ ಲಿಂಗವ
ಕೂಡಬಲ್ಲಾತನೇ ಶರಣ ನೋಡಾ ಅಖಂಡೇಶ್ವರಾ"

ನಡೆ ನುಡಿ ಎರಡೂ ಸಮ ಪ್ರಮಾಣದಲ್ಲಿ ಪರಿಪೂರ್ಣ ತುಂಬಿ ಮಾನವತ್ವದಿಂದ ಶರಣತ್ವಕ್ಕೆ ,ಪ್ರೀತಿ ತುಂಬಿದ ನುಡಿಯಿಂದ ಸಕಲಕ್ಕೂ ಕಾರಣರು ಮುನವಳ್ಳಿಯ ನಡೆದಾಡುವ ದೇವರು ಮುನಿಪುರಾಧೀಶರಾದ ಶ್ರೀ,ಮ.ನಿ,ಪ್ರ,ಮುರುಘೇಂದ್ರ ಮಹಾಸ್ವಾಮಿಗಳು.ಇಂದು ಸೋಮಶೇಖರ ಮಠದಲ್ಲಿ ಜರುಗುತ್ತಿರುವ ಕಾರ್ಯಕ್ರಮಗಳನ್ನು ನೋಡಿದರೆ ಎಷ್ಟೊಂದು ವಿಭಿನ್ನ ಹಾಗೂ ಇತರರಿಗೆ ಮಾದರಿ ಎನಿಸುವ ಕಾರ್ಯಗಳನ್ನು ಸ್ವಾಮೀಜಿಯವರು ಹಮ್ಮಿಕೊಳ್ಳುತ್ತಿರುವರೆಂದರೆ.ಲಿಂಗೈಕ್ಯ ಬಸವಲಿಂಗ ಮಹಾಸ್ವಾಮಿಗಳ ಸ್ಮರಣೆಯಲ್ಲಿ ಪ್ರತಿವರ್ಷವೂ ಜರುಗಿಸುತ್ತಿರುವ ಪುರಾಣ ಕಾರ್ಯಕ್ರಮದ ನಿಮಿತ್ಯ ದಾನಿಗಳ ಸತ್ಕಾರ.ಉಚಿತ ಸಾಮೂಹಿಕ ವಿವಾಹಗಳು.ಗುರು ಪರಂಪರೆಯ ನಿಮಿತ್ಯ ಉತ್ತಮ ಶಿಕ್ಷಕರ ಸನ್ಮಾನ, ರಾಜಕೀಯ ರಂಗದಲ್ಲಿ ಸೇವೆಗೈದವರ ಸನ್ಮಾನ, ಪತ್ರಿಕಾರಂಗದ ಸಾಧನೆಗಾಗಿ ಪತ್ರಕರ್ತರ ಸನ್ಮಾನ, ಪ್ರಗತಿಪರ ರೈತರ ಸನ್ಮಾನ, ಮಾಜಿ ಯೋಧರಿಗೆ ಸನ್ಮಾನ. ಹೀಗೆ ವಿವಿಧ ರಂಗಗಳಲ್ಲಿ ಸ್ಮರಣೀಯ ಸೇವೆಗೈದವರನ್ನು ಗುರುತಿಸಿ ಅವರಿಗೆ ಸನ್ಮಾನಿಸುವ ಜೊತೆಗೆ ಇನ್ನೂ ಹೆಚ್ಚಿನ ಕಾರ್ಯ ಮಾಡಲು ಪ್ರೋತ್ಸಾಹಿಸುತ್ತಿರುವುದು ಶ್ಲಾಘನೀಯ.

ಪೂಜ್ಯರು ಪ್ರತಿವರ್ಷ ತಮ್ಮ ಜನ್ಮದಿನಾಚರಣೆಯನ್ನು ಬಡಮಕ್ಕಳ ಶಿಕ್ಷಣಕ್ಕಾಗಿ ಕೊಡುಗೆ ನೀಡುವ ದಾನ–ಧರ್ಮದ ಮೂಲಕ ಆಚರಿಸಿಕೊಳ್ಳುತ್ತಿರುವುದಲ್ಲದೇ ರಕ್ತದಾನ ಶಿಬಿರ.ಮುನವಳ್ಳಿ ತಾಲೂಕು ಹೋರಾಟ ಸಮೀತಿಯ ಹೋರಾಟದ ನೇತೃತ್ವ.ಅಣ್ಣಾ ಹಜಾರೆಯಂಥ ಭೃಷ್ಟಾಚಾರ ತೊಲಗಿಸಿ ಆಂದೋಲನ ಸಂಘಟನೆಯಂಥಹ ಅನೇಕ ಸಾಮಾಜಿಕ ಜಾಗೃತಿಯ ಕಾರ್ಯಗಳಲ್ಲಿ ತಮ್ಮನ್ನು ತೊಡಗಿಸಿಕೊಳ್ಳುವ ಮೂಲಕ ಶ್ರೀಸಾಮಾನ್ಯರ ಸ್ವಾಮೀಜಿಯಾಗಿ ತಮ್ಮ ಬದುಕನ್ನು ಮೀಸಲಾಗಿಸಿರುವರು.

ನಾಡಿನ ಎಲ್ಲೆಡೆ ಸ್ವಾಮೀಜಿ ಇಂದು ವಿವಿಧ ಕಾರ್ಯಕ್ರಮಗಳಲ್ಲಿ ಬಿಡುವಿಲ್ಲದೇ ಪಾಲ್ಗೊಳ್ಳುತ್ತಿದ್ದರೂ ಕೂಡ ಮುನವಳ್ಳಿಯಲ್ಲಿ ಯಾವುದೇ ಕಾರ್ಯಕ್ರಮಗಳಿದ್ದರೂ ಕೂಡ ಬಿಡುವು ಮಾಡಿಕೊಂಡು ಪಾಲ್ಗೊಳ್ಳುವ ಮೂಲಕ ಈ ಭಾಗದ ನಡೆದಾಡುವ ದೇವರೆಂದು ಭಕ್ತ ಜನಸಮೂಹದ ಮನದಲ್ಲಿ ನೆಲೆಸಿರುವರು.

### 4.3 ಮರಿ ಕೋಗಿಲೆಗಳ ಸಂಗೀತ ಸಂಭ್ರಮ

ಮುನವಳ್ಳಿ ಬೆಳಗಾವಿ ಜಿಲ್ಲೆಯ ಸವದತ್ತಿ ತಾಲೂಕಿನ ಐತಿಹಾಸಿಕ ಗ್ರಾಮ.ಇಲ್ಲಿನ ಮಲಪ್ರಭಾ ನದಿ, ಆಲೂರು ಮಠ, ಸೋಮಶೇಖರ ಮಠ. ಶ್ರೀ ಪಂಚಲಿಂಗೇಶ್ವರ ದೇವಾಲಯ,ಕೈವಲ್ಯಾಶ್ರಮ,

ವಿಠ್ಠಲ ಮಂದಿರ.ತೊರಗಲ್ ನಾಡಿನ ಕೋಟೆ,ಬಿ.ಈಡಿ ವರೆಗಿನ ವಿವಿಧ ಶಿಕ್ಷಣ ಸಂಸ್ಥೆಗಳು ಶ್ರೀ ರೇಣುಕಾ ಸಕ್ಕರೆ ಕಾರ್ಖಾನೆಗಳ ಮೂಲಕ ತನ್ನದೇ ಆದ ಖ್ಯಾತಿಯನ್ನು ಗಳಿಸಿದ ತಾಲೂಕ ಕೇಂದ್ರದಿಂದ 16 ಕಿ.ಮೀ ಅಂತರದಲ್ಲಿರುವ ವಿಶಿಷ್ಟ ಚಾರಿತ್ರ್ಯವುಳ್ಳ ಗ್ರಾಮ.ಇಂಥ ಗ್ರಾಮದಲ್ಲಿ ಕಳೆದ ಹತ್ತಾರು ವರ್ಷಗಳಲ್ಲಿ ಇಲ್ಲಿನ ಕಲೆ,ಸಾಂಸ್ಕೃತಿಕ ಸಂಘಟನೆಗಳಾದ ನಾಡ ಹಬ್ಬ ಸಮೀತಿ,ಯುವ,ಕ್ರೀಡೆ ಮತ್ತು ಸಾಂಸ್ಕೃತಿಕ ಸಂಘಟನೆಗಳ ಆಶ್ರಯದಲ್ಲಿ ರಾಜ್ಯಮಟ್ಟದಲ್ಲಿ ಜರುಗುತ್ತಿರುವ ವಿವಿಧ ಕಾರ್ಯಕ್ರಮಗಳು ಪ್ರತಿ ವರ್ಷವೂ ಇಲ್ಲಿನ ಕುಸ್ತಿ ಮೈದಾನದಲ್ಲಿ ಜರುಗುತ್ತ ಬಂದಿವೆ.

ಕಳೆದ ಹತ್ತು ವರ್ಷಗಳಲ್ಲಿ ಇಲ್ಲಿ ಜರುಗಿದ ವಿವಿಧ ಕಾರ್ಯಕ್ರಮಗಳು ಇಂತಿವೆ.ಸಂಗೀತ ಸುಧೆ(ಸ್ಟಾರ್ ಸಿಂಗರ್ಸ),ಜಾಗತಿಕ ಖ್ಯಾತಿಯ ಗಾನ ಲಹರಿ,(ರಾಷ್ಟ್ರ ಮಟ್ಟದ ಕಬಡ್ಡಿ ಹಾಗೂ ಸಂಗೀತ ಕಾರ್ಯಕ್ರಮ),ಎಂದೂ ಮರೆಯದ ಹಾಡು(ದಿವಂಗತ ಪುಟ್ಟರಾಜ ಗವಾಯಿ,ಡಾ;ಎಂ.ಬಿ.ಹೂಗಾರ,ಸ್ಟಾರ್ ಸಿಂಗರ್ ಆದಿತ್ಯ ಇವರ ಸ್ಮರಣೆಯಲ್ಲಿ),ಆದರ್ಶ ದಂಪತಿಗಳು,ಎದೆ ತುಂಬಿ ಹಾಡುವೆನು,ಝುಗಝುಗಿಸುವ ಬಂಗಾರದ ಬೇಟೆ,ರಾಣಿ ಮಹಾರಾಣಿ,ಯಾರಿಗುಂಟು ಯಾರಿಗಿಲ್ಲ,ನೀನಾ,? ನಾನಾ? ಮುನವಳ್ಳಿ ಲಕ್ಷಾಧಿಪತಿ. ಹೀಗೆ ರಾಜ್ಯ ಮಟ್ಟದಲ್ಲಿ ಕಾರ್ಯಕ್ರಮಗಳನ್ನು ಪ್ರಾಯೋಜಕತ್ವ ಹಾಗೂ ಸ್ಥಳೀಯ ಸಂಘಟಕರ ಸಹಕಾರದೊಂದಿಗೆ ನಡೆಸುತ್ತ ಬಂದಿದ್ದು.ತಾಲೂಕಿನ ಬಾಳೋಜಿ ನೆಟವರ್ಕ ಮೀಡಿಯಾದವರು ಈ ಕಾರ್ಯಕ್ರಮವನ್ನು ತಮ್ಮ ಚಾನೆಲ್ ಮೂಲಕ ತಾಲೂಕಿನಾದ್ಯಂತ ಮನೆಮನೆಗಳನ್ನು ತಲುಪಿಸುವ ಜೊತೆಗೆ ಬಸವರಾಜ ಪೋಟೋ ಸ್ಟುಡಿಯೋ ಮುನವಳ್ಳಿ ಇವರ ವಿಶಿಷ್ಟ ಡಿಸೈನ್ ಪೋಸ್ಟರಗಳ ವೈಭವದೊಂದಿಗೆ ಕಾರ್ಯಕ್ರಮ ನಿರ್ವಹಣೆಯಲ್ಲಿ ರಾಜ್ಯ ಮಟ್ಟದಲ್ಲಿ ಹೆಸರು ಮಾಡುತ್ತಿರುವ ದೈಹಿಕ ಶಿಕ್ಷಕ ಭವಾನಿ ಖೊಂದುನಾಯ್ಕ ಇವರಿಗೆ ಬೆಂಬಲವಾಗಿ ನಿಂತ ಊರಿನ ಎಲ್ಲ ಗಣ್ಯಮಾನ್ಯರು, ಸಂಘಟನೆಗಳು, ಪತ್ರಿಕಾ ಪ್ರತಿನಿಧಿಗಳು, ಇಂಥ ಕಾರ್ಯಕ್ರಮಗಳು ಮುನವಳ್ಳಿ ನಗರದಲ್ಲಿ ನಡೆಯುತ್ತಿರುವುದಕ್ಕೆ ಪ್ರತ್ಯಕ್ಷ ಹಾಗೂ ಅಪರೋಕ್ಷ ದುಡಿಯುವ ನೂರಾರು ಸಹೃದಯಗಳು ಇಂದು ಮುನವಳ್ಳಿಯಲ್ಲಿ ವಿಭಿನ್ನ ಸಾಂಸ್ಕೃತಿಕ ಕಾರ್ಯಕ್ರಮಗಳು ಜರುಗುತ್ತಿರುವುದಕ್ಕೆ ಸಾಕ್ಷಿಯಾಗಿವೆ.

ಪೆಬ್ರುವರಿ 3.2013 ರಂದು ಸಂಜೆ ಮುನವಳ್ಳಿಯ ಕುಸ್ತಿ ಮೈದಾನದಲ್ಲಿ ಝುಗಮಗಿಸುತ್ತಿರುವ ವೇದಿಕೆಯಲ್ಲಿ ಮರಿ ಕೋಗಿಲೆಗಳ ಸ ರಿ ಗ ಮ ಪ ಎನ್ನುವ ಕಾರ್ಯಕ್ರಮ ಮುನವಳ್ಳಿ ಸಮಸ್ತ ನಾಗರಿಕರ ಸಹಕಾರದೊಂದಿಗೆ ಆಯೋಜನೆಯಾಗಿತ್ತು.ಈ ಕಾರ್ಯಕ್ರಮದಲ್ಲಿ ತಮ್ಮ ಸಂಗೀತ ಸುಧೆಯನ್ನು ಹರಿಸಲು ಖ್ಯಾತ ಹಿನ್ನಲೆ ಗಾಯಕಿ ಅರ್ಚನಾ ಉಡುಪ,ರಾಜ್ಯದ ಪ್ರತಿಷ್ಠಿತ ದೂರದರ್ಶನ ವಾಹಿನಿಗಳಾದ ಝೀ ಟೀವಿ, ಈ ಟೀವಿ, ಕಸ್ತೂರಿ, ಸುವರ್ಣ, ಟಿವಿ 9, ಉದಯ ಮೊದಲಾದ ವಾಹಿನಿಗಳ ಅನೇಕ ಕಾರ್ಯಕ್ರಮಗಳಲ್ಲಿ ಕಾಣಿಸಿಕೊಳ್ಳುತ್ತಿರುವ ಮರಿ ಕೋಗಿಲೆಗಳಾದ ಗಗನ್, ವಿಶ್ವನಾಥ, ಆದಿತಿ, ಕೀರ್ತನ ಇಲ್ಲಿ ಆಗಮಿಸುತ್ತಿದ್ದು. ಬೆಂಗಳೂರಿನಿಂದ ದೀಪು ಮತ್ತು ತಂಡದವರು ಸಂಗೀತ ಸಂಯೋಜನೆಗೆ ಮುನವಳ್ಳಿಗೆ ಪ್ರಪ್ರಥಮ ಬಾರಿಗೆ ಆಗಮಿಸುವ ಮೂಲಕ ಮುನವಳ್ಳಿಯಲ್ಲಿ ಸಾಂಸ್ಕೃತಿಕ ಸಂಗೀತ ಸುಧೆಯನ್ನು ಹರಿಸಿದರು.[19]

---

19. ವೈ. ಬಿ. ಕಡಕೋಳ, 'ಮರಿಕೋಗಿಲೆಗಳ ಸಂಗೀತ ಸಂಭ್ರಮ', ಲೋಕದರ್ಶನ ದಿನಪತ್ರಿಕೆ, 3-2-2013, ಪುಟ - 3

**4.4 ನಾಡಹಬ್ಬ**

ನವರಾತ್ರಿ ಹಿಂದೂಗಳೆಲ್ಲರಿಗೂ ಅತ್ಯಂತ ಪವಿತ್ರವಾದ ಹಬ್ಬ. ಈ ದಿನ ಮನೆ ಮನಗಳಲ್ಲಿ ಶುಚಿತ್ವದ ಜೊತೆಗೆ ಧಾರ್ಮಿಕ ಶ್ರದ್ಧಾ ಭಕ್ತಿಯಿಂದ ಒಂಬತ್ತು ದಿನಗಳ ಕಾಲ ಅಂದರೆ ಅಶ್ವಯುಜ ಮಾಸದ ಶುಕ್ಲಪಕ್ಷ ಪಾಡ್ಯದಿಂದ ದಶಮಿಯವರೆಗೆ ಒಂಬತ್ತು ದಿನಗಳ ಕಾಲ ಈ ಹಬ್ಬದ ಆಚರಣೆ ರಾಷ್ಟ್ರದಾದ್ಯಂತ ಜರುಗುತ್ತದೆ.

ಸಾರ್ವಜನಿಕವಾಗಿ ಈ ಹಬ್ಬವನ್ನು ಅನೇಕ ಕಡೆಗಳಲ್ಲಿ ಆಚರಿಸುತ್ತಾರೆ. ಮೈಸೂರು ದಸರಾ ವಿಶ್ವ ವಿಖ್ಯಾತಿ ಪಡೆದಿದೆ. ಗ್ರಾಮೀಣ ಪ್ರದೇಶಗಳಲ್ಲೂ ಕೂಡ ಹಲವು ಸಂಘ ಸಂಘಟನೆಗಳು ಸ್ವಂತ ಬಲದ ಮೇಲೆ ಸಾರ್ವಜನಿಕರ ಸಹಕಾರದೊಡನೆ ಇಂಥ ನವರಾತ್ರಿಯನ್ನು ಬಹಳ ಅರ್ಥಪೂರ್ಣವಾಗಿ ಆಚರಿಸುತ್ತಾ ಬಂದಿದ್ದು, ಕಳೆದ ಹದಿಮೂರು ವರ್ಷದಿಂದ ಮುನವಳ್ಳಿಯ ನಾಡಹಬ್ಬ ಉತ್ಸವ ಸಮಿತಿಯವರು ಬಹಳ ವೈಶಿಷ್ಟ್ಯ ಪೂರ್ಣವಾಗಿ ಆಚರಿಸುತ್ತಾ ಬಂದಿದ್ದು 2013 ಕ್ಕೆ ಹದಿಮೂರನೆಯ ವರ್ಷಕ್ಕೆ ದಾಪುಗಾಲನ್ನಿಡುತ್ತಿದೆ.

ಬೆಳಗಾವಿ ಜಿಲ್ಲೆ ಸವದತ್ತಿ ತಾಲೂಕಿನ ಮುನವಳ್ಳಿ ಐತಿಹಾಸಿಕ, ಸಾಮಾಜಿಕ, ಧಾರ್ಮಿಕವಾಗಿ ತನ್ನದೇ ಖ್ಯಾತಿ ಹೊಂದಿದ ಸುಗ್ರಾಮ. ಇಲ್ಲಿ ನಾಡಹಬ್ಬ ಮೊದಲಿನಿಂದಲೂ ಜರುಗುತ್ತಿತ್ತು ಅದು ಕ್ರಮೇಣ ತನ್ನ ಕಾರ್ಯ ಚಟುವಟಿಕೆಗಳನ್ನು ನಿಲ್ಲಿಸಿತು. ನಂತರದ ದಿನಗಳಲ್ಲಿ ಎಸ್.ಪಿ.ಜೆ.ಜಿ. ಪ್ರೌಢಶಾಲೆಯ ಶಿಕ್ಷಕ ಬಸವರಾಜ ನಾವಲಗಟ್ಟಿಯವರು ಯುವ ಸಂಘಟನೆಯ ನೇತೃತ್ವದಲ್ಲಿ ನಾಡಹಬ್ಬ ಕಾರ್ಯಕ್ರಮಕ್ಕೆ ಪುನಃ ಚಾಲನೆ ನೀಡುವ ಕಾರ್ಯ ಕೈಗೊಂಡಾಗ, ಗ್ರಾಮದ ಹಿರಿಯರು, ಯುವಕರು, ರಾಜಕೀಯ ದುರೀಣರು, ಅವರಿವರೆನ್ನದೇ ಎಲ್ಲ ಸಾಹಿತ್ಯ ಕಲೆ, ಸಾಂಸ್ಕೃತಿಕ, ಅಭಿಲಾಷೆಯುಳ್ಳ ಜನ ಕೈಗೂಡಿದರು.

ಯಾವುದೇ ಕಾರ್ಯಕ್ಕೆ ಬರೀ ಸಲಹೆಗಳಾದರೆ ಸಾಲದು. ಆ ಕಾರ್ಯ ಸಾಕಾರವಾಗಲು ತನು–ಮನ–ಧನ ಸಮರ್ಪಿತವಾಗಬೇಕು. ಎಂದುಕೊಂಡು ನಾಡಹಬ್ಬ ಉತ್ಸವ ಸಮಿತಿ ಹುಟ್ಟುಹಾಕಿದರು. ಪ್ರಾರಂಭದಲ್ಲಿ ಅಂದರೆ 2001ರಲ್ಲಿ 22–10–2001ರಿಂದ 26–10–2001ರವರೆಗೆ ಸ್ಥಳೀಯ ಶಂಕರಲಿಂಗ ದೇವಾಲಯದಲ್ಲಿ ಪ್ರಥಮ ವರ್ಷದ ನಾಡಹಬ್ಬ ಕಾರ್ಯಕ್ರಮ ಜರುಗಿತು.

ಮುನವಳ್ಳಿ ಸೋಮಶೇಖರ ಮಠದ ಸ್ವಾಮೀಜಿಗಳ ಅಧ್ಯಕ್ಷತೆಯಲ್ಲಿ ತಾಯಿ ಭುವನೇಶ್ವರಿ ಭಾವಚಿತ್ರದ ಮೆರವಣಿಗೆ ದೃಶ್ಯ ವೈಭವ ನಾಡಹಬ್ಬಕ್ಕೆ ಚಾಲನೆ ನೀಡಿದಾಗ, ಶಂಕರಲಿಂಗ ದೇವಾಲಯದಲ್ಲಿ ಸಂಜೆ ರಾತ್ರಿ ಹೊತ್ತಿಗೆ ವಿವಿಧ ಉಪನ್ಯಾಸಗಳು, ಸ್ಪರ್ಧೆಗಳು ಜರುಗುವ ಮೂಲಕ ಪ್ರಥಮ ವರ್ಷದ ನಾಡಹಬ್ಬ ಕೊನೆಗೊಂಡಿತು. ಕಾರ್ಯಕ್ರಮ ಸಂಘಟಕರ ಮನದಲ್ಲಿ ಆಗ ಮೊಳಕೆಯೊಡೆದು ನಿಂತಿದ್ದು ಮುಂದಿನ ವರ್ಷ ಹೇಗೆ ಈ ಕಾರ್ಯಕ್ರಮ ಆಯೋಜಿಸಬೇಕು.? ಎನ್ನುವ ಆಲೋಚನೆಗಳು. ಆಗ ಮೂಡಿ ಬಂದ ವಿಚಾರಧಾರೆ ಈ ನಾಡಹಬ್ಬ ನಿರಂತರವಾಗಿ ನಡೆಯಲು “ಶಾಶ್ವತ ನಿಧಿ” ಹುಟ್ಟು ಹಾಕುವುದು.

ಗ್ರಾಮದ ದಾನಿಗಳಿಂದ ಹಣ ಪಡೆದು ಅದನ್ನು ಒಂದು ವರ್ಷದವರೆಗೆ ಇಡುಗಂಟು ರೂಪದಲ್ಲಿ ಬ್ಯಾಂಕಿನಲ್ಲಿ ಇಟ್ಟು ಆ ಬ್ಯಾಂಕ್ ಬಡ್ಡೀ ದರದಲ್ಲಿ ಕಾರ್ಯಕ್ರಮ ಆಯೋಜಿಸುವುದು ಜೊತೆಗೆ ನಾಡಹಬ್ಬದಂದು ಹಾಗೂ ಪೂರ್ವಭಾವಿಯಾಗಿ ಏರ್ಪಡಿಸುವ ಸ್ಪರ್ಧೆಗಳಿಗೆ ಬಹುಮಾನ ಕೂಡ ಪ್ರಾಯೋಜಕರ ರೂಪದಲ್ಲಿ ಪಡೆಯುವುದು. ಹೀಗೆ ಅನೇಕ ಕಾರ್ಯಕ್ರಮಗಳಿಗೆ ಎಲ್ಲ ಸದಸ್ಯರು ಯೋಜನೆ ರೂಪಿಸಿದಾಗ ಹಂತ ಹಂತವಾಗಿ ದೇಣಿಗೆ ರೂಪದಲ್ಲಿ ವಸ್ತುಗಳ ರೂಪದಲ್ಲಿ ಹನದ ರೂಪದಲ್ಲಿ ಈ ಕಾರ್ಯಕ್ರಮ ಶಾಶ್ವತವಾಗಿ ನಡೆದುಕೊಂಡು ಬರಲು ವೇದಿಕೆ ನಿರ್ಮಾಣಗೊಂಡಿದ್ದು ನಿಜಕ್ಕೂ ದಾಖಲಾರ್ಹ ಸಂಗತಿ.

ಇಲ್ಲಿಯವರೆಗೆ 1,68,549 ರೂಪಾಯಿಗಳು ಶಾಶ್ವತ ನಿಧಿಯಲ್ಲಿ ಸಂಗ್ರಹವಾಗಿರುವ ಜೊತೆಗೆ ವೇದಿಕೆ ನಿರ್ಮಾಣ, ಭುವನೇಶ್ವರಿ ಭಾವಚಿತ್ರದ ಕಟೌಟ ಸೇರಿದಂತೆ ಅನೇಕ ವಸ್ತುಗಳು, ಬ್ಯಾನರ್‌ಗಳು ಒಂದೇ ಎರಡೇ ಅಭೂತಪೂರ್ವ ಸಹಕಾರ ಸ್ಥಳೀಯರು ಹಾಗೂ ಹೊರಗಿನ ದಾನಿಗಳಿಂದ ಸಂಗ್ರಹವಾಗುವ ಮೂಲಕ ಕಳೆದ ಎಂಟು ವರ್ಷಗಳಿಂದಲೂ ರಾಜ್ಯಮಟ್ಟದ ಕಾರ್ಯಕ್ರಮ ಮುನವಳ್ಳಿಯಲ್ಲಿ ಆಯೋಜಿಸುವ ಮೂಲಕ ನಾಡಹಬ್ಬಕ್ಕೆ ನೂತನಕಳೆ ಬಂದಿದೆ.

ಈ ಕಾರ್ಯಗಳಿಗೆ ಶಂಕರಲಿಂಗ ದೇವಾಲಯದ ಚಿದಂಬರ ಶಾಂತಿನಿಕೇತನ ಕಲ್ಯಾಣ ಮಂಟಪ ಕೂಡ ದೇವಾಲಯದವರು ಒದಗಿಸುವ ಮೂಲಕ ಇಂಥ ಕಾರ್ಯಕ್ರಮ ಯಶಸ್ವಿಯಾಗಲು ಪ್ರೇರಕರಾಗಿರುವುದು ಗಮನಾರ್ಹ ಸಂಗತಿ.

ಯುವಕರು ಸಂಘಟನೆ ಜೊತೆಗೆ ಎಲ್ಲ ವರ್ಗದ ಜನರಿಗೂ ಇಷ್ಟವಾಗುವ ಕಾರ್ಯಕ್ರಮ ಆಯೋಜಿಸುವ ಸಮಿತಿಯವರು ಪ್ರತಿ ವರ್ಷ ನಾಡಹಬ್ಬ ಪ್ರಾರಂಭವಾಗುವ ಒಂದು ತಿಂಗಳು ಮೊದಲು ಸ್ಥಳೀಯ ಸಾಹಿತಿ, ಕಲಾವಿದರು, ಪತ್ರಕರ್ತರು, ಬುದ್ದಿಜೀವಿಗಳು, ಉಪನ್ಯಾಸಕರು, ಹಿರಿಯರು, ಹೀಗೆ ಸಮಾನ ಮನಸ್ಕರ ಸಭೆ ಕರೆದು ಈ ವರ್ಷ ನಾಡಹಬ್ಬಕ್ಕೆ ಯಾವ ರೀತಿ ಕಾರ್ಯಕ್ರಮಗಳಿದ್ದರೆ ಅನುಕೂಲ, ಪ್ರಾಯೋಜಕರಾರು? ಬಹುಮಾನ ದಾನಿಗಳು, ಇತ್ಯಾದಿ ಕುರಿತು ಸಭೆಯ ಮೂಲಕ ಸಲಹೆ ಪಡೆದುಕೊಂಡು ನಂತರ ಕಾರ್ಯಕ್ರಮಗಳಿಗೆ ಅಂತಿಮ ರೂಪ ನೀಡುತ್ತಾರೆ. ಹೀಗಾಗಿ ಒಂದು ತಿಂಗಳ ಮೊದಲೇ ಪೂರ್ವ ಸಿದ್ದತೆಗಳು ಜರುಗಿ, ಕಾರ್ಯಕ್ರಮ ರೂಪಿತವಾಗಿರುವ ಯೋಜನೆ ನಿಜಕ್ಕೂ ಅಭಿನಂದನಾರ್ಹವಾದದು.

ಹೀಗಾಗಿ ಕಳೆದ 12 ವರ್ಷಗಳಿಂದಲೂ ವರ್ಷದಿಂದ ವರ್ಷಕ್ಕೆ ವಿಭಿನ್ನ ಕಾರ್ಯಕ್ರಮಗಳು "ನಾಡಹಬ್ಬ" ದಂಗವಾಗಿ ಜರುಗುತ್ತಾ ಬಂದಿದ್ದು ದಾಖಲಾರ್ಹ.

2001 ರಲ್ಲಿ ರಂಗೋಲಿ ಸ್ಪರ್ಧೆ, ಜನಪದ ಗೀತೆ ಸ್ಪರ್ಧೆ, ಕ್ರೀಡಾ ಸ್ಪರ್ಧೆ, ಚರ್ಚಾ ಸ್ಪರ್ಧೆ ಸ್ಥಳೀಯ ಮಟ್ಟದಲ್ಲಿ ಜರುಗಿದವು.

2002 ರಲ್ಲಿ ಶಾಲಾ ಮಕ್ಕಳಿಗಾಗಿ ಬೌದ್ಧಿಕ ಪರೀಕ್ಷೆ, ದೇಶಭಕ್ತಿ ಗೀತೆ, ಭಾವಗೀತೆ ಸ್ಪರ್ಧೆಗಳಿದ್ದರೆ, ಸಾರ್ವಜನಿಕರಿಗಾಗಿ "ಇಂದಿನ ಪ್ರಚಾರ ಮಾಧ್ಯಮಗಳ ಸೆಳೆತದಿಂದ ನಮ್ಮ ದೇಶದ ಸಂಸ್ಕೃತಿಯನ್ನು

ಉಳಿಸಿಕೊಳ್ಳಲು ಸಾಧ್ಯವೇ? " ಎಂಬ ಚರ್ಚಾಸ್ಪರ್ಧೆ ಏರ್ಪಡಿಸಲಾಗಿತ್ತು. ಜನ ಮೆಚ್ಚಿದ ಶಿಕ್ಷಕರ ಸನ್ಮಾನ ಕೂಡ ಜರುಗಿತು.

2003 ರಲಿ ಜಿಲ್ಲಾ ಮಟ್ಟದಲ್ಲಿ ಪದವಿಪೂರ್ವ ವಿದ್ಯಾರ್ಥಿ-ವಿದ್ಯಾರ್ಥಿನಿಯರಿಗಾಗಿ ರಸಪ್ರಶ್ನೆ ಹಾಗೂ ತಾಲೂಕಾ ಮಟ್ಟದಲ್ಲಿ ಮಾಧ್ಯಮಿಕ ವಿದ್ಯಾರ್ಥಿಗಳಿಗೆ ಬೌದ್ಧಿಕ ಪರೀಕ್ಷೆ ಸ್ಥಳೀಯ ಪ್ರಾಥಮಿಕ ಶಾಲೆಯ ಮಕ್ಕಳಿಗಾಗಿ ಭಾಷಣ ಸ್ಪರ್ಧಿಯನ್ನೂ ಸಾರ್ವಜನಿಕರಿಗಾಗಿ ಅಂತ್ಯಾಕ್ಷರಿ ಸ್ಫರ್ಧೆಗಳನ್ನು ಜರುಗಿಸುವ ಜೊತೆಗೆ ಬಿ.ಪ್ರಾಣೇಶ್‌ರ ಹಾಸ್ಯಸಂಜೆ ಕಾರ್ಯಕ್ರಮವನ್ನು ಸಂಘಟಿಸಲಾಯಿತು.

2004 ರಲ್ಲಿ ಭಗತ್‌ಸಿಂಗ್ ಯುವಕ ಮಂಡಳದವರಿಂದ ನಾಟಕ "ಅಳಿಯನ ಮನೆ" ಹಾಗೂ ಆದರ್ಶ ದಂಪತಿಗಳು. ಕಾರ್ಯಕ್ರಮ. ವೀಜ್ಞಾನಿಕ ಜಾಗೃತಿ ವರ್ಷಾಚರಣೆ ನಿಮಿತ್ತ ಪ್ರೌಡಶಾಲೆಯ ವಿದ್ಯಾರ್ಥಿಗಳಿಗಾಗಿ " ಕುಸಿಯುತ್ತಿರುವ ಅಂತರ್ಜಲ ಸಂರಕ್ಷಣೆ" ಕುರಿತು ಪ್ರಬಂದಸ್ಫರ್ದೆಯನ್ನು ನಡೆಸಲಾಯಿತು. ಬಸವಲಿಂಗಯ್ಯ ಹಿರೇಮಠರಿಂದ ಜಾನಪದ ಸಂಜೆ, ವಸ್ತು ಪ್ರದರ್ಶನ,ಜಿಲ್ಲಾ ಮಟ್ಟದ ರಸಪ್ರಶ್ನೆ. ಕರ್ನಾಟಕ ಕ್ವಿಜ್. ಪಿ.ಯು.ಸಿ ವಿದ್ಯಾರ್ಥಿಗಳಿಗಾಗಿ ರಾಜ್ಯ ಮಟ್ಟದ ಚರ್ಚಾ ಸ್ಪರ್ಧೆ " ಪರಭಾಷಾ ಚಿತ್ರಗಳಿಂದ ಕನ್ನಡ ಚಿತ್ರೋದ್ಯಮ ನಲುಗುತ್ತಿದೆಯೇ.?" ಏರ್ಪಡಿಸಲಾಗಿತ್ತು.

2005 ರಲ್ಲಿ ಮುಕ್ತ ಕಬಡ್ಡಿ ಪಂದ್ಯಾವಳಿಯನ್ನು ನಡೆಸುವ ಮೂಲಕ ಕ್ರೀಡಾಭಿಮಾನ ಮೆರೆದರು. ಅದೇ ವರ್ಷ ನರಸಿಂಹ ಜೋಶಿ ತಂಡದವರಿಂದ ಹಾಸ್ಯ, ಚಿತ್ರಕಲಾ ಪ್ರದರ್ಶನ. ರವಿ ಭಜಂತ್ರಿಯವರಿಂದ ದೈನಂದಿನ ಜೀವನದಲ್ಲಿ ಹಾಸ್ಯ" ಉಪನ್ಯಾಸ ಮೊದಲಾದ ಕಾರ್ಯಕ್ರಮಗಳ ಜೊತೆಗೆ ಪ್ರತಿವರ್ಷದಂತೆ ಭಾಷಣ,ಚರ್ಚಾಸ್ಪರ್ಧೆ ಇತ್ಯಾದಿ ಸಂಘಟಿಸಲಾಗಿತ್ತು.

2006 ರಲ್ಲಿ ಬೆಳಗಾವಿ ವಿಭಾಗೀಯ ಮಟ್ಟದ ಚರ್ಚಾಸ್ಪರ್ಧೆ ಪದವಿ ವಿದ್ಯಾರ್ಥಿಗಳಿಗಾಗಿ " ಸಮ್ಮಿಶ್ರ ಸರಕಾರಗಳಿಂದ ರಾಷ್ಟ್ರದ ಅಭಿವೃದ್ದಿ ಸಾಧ್ಯವೇ.? ಹಾಗೂ "ಝುಗಮಗಿಸುವ ಬಂಗಾರದ ಬೇಟೆ" ಕಾರ್ಯಕ್ರಮಗಳು ಯಶಸ್ವಿಯಾಗಿ ಜರುಗಿ ನಾಡಹಬ್ಬದ ಕಳೆಯನ್ನು ಮತ್ತಷ್ಟು ಹೆಚ್ಚಿಸಿದವು.

2007 ರಲ್ಲಿ ಇಬ್ರಾಹಿಂ ಸುತಾರ ಇವರಿಂದ "ಸಾರ್ಥಕ ಬದುಕು" ಕುರಿತು ಉಪನ್ಯಾಸ. "ಎದೆತುಂಬಿ ಹಾಡುವೆನು"(10 ರಿಂದ 16 ವರ್ಷ ವಯೋಮಿತಿಯೊಳಗಿನ ಬಾಲಕ ಬಾಲಕಿಯರಿಗಾಗಿ) ಕಾರ್ಯಕ್ರಮವನ್ನು ಸಂಘಟಿಸುವ ಜೊತೆಗೆ ಚರ್ಚಾ ಸ್ಪರ್ಧೆ, ಭಾಷಣ, ಇತ್ಯಾದಿ ಪ್ರತಿವರ್ಷದಂತೆ ಜರುಗಿದವು.

2008 ರಲ್ಲಿ ಬಾಲಗಂಧರ್ವ ಕಾರ್ಯಕ್ರಮ ಮತ್ತು ಶ್ರೀಶೈಲ ಹುದ್ದಾರ ರವರಿಂದ ಜಾನಪದ ಸಂಜೆ. ಬಸವರಾಜ ಮಹಾಮನೆಯವರಿಮದ ಹಾಸ್ಯ ಕಾರ್ಯಕ್ರಮ. ಜಿ.ಕೆ ಕಾಡೇಶಕುಮಾರರವರಿಂದ ವಿಶೇಷ ಸಂಗೀತ ಕಾರ್ಯಕ್ರಮ ಹಮ್ಮಿಕೊಳ್ಳಲಾಯಿತು.

2009 ರಲ್ಲಿ ಪವಾಡ ರಹಸ್ಯ ಬಯಲು(ರಾಜು ಬದಾಮಿ) ಚರ್ಚಾ ಸ್ಪರ್ಧೆ " ಇಂಗ್ಲೀಷ ಕಲಿಕೆಯಿಂದ ಮಾತ್ರ ಪ್ರಗತಿ ಸಾಧ್ಯವೇ.?" ಡಾ. ಆನಂದ ಪಾಂಡುರಂಗಿಯವರಿಗಂದ " ಮಾನಸಿಕ ಸ್ವಾಸ್ಥ್ಯ" ಕುರಿತು ಉಪನ್ಯಾಸ ಕಾರ್ಯಕ್ರಮಗಳು ಜರುಗಿದವು.

2011 ರಲ್ಲಿ ಕಾಲೇಜು ವಿದ್ಯಾರ್ಥಿ ವಿದ್ಯಾರ್ಥಿನಿಯರಿಗಾಗಿ ಜಿಲ್ಲಾಮಟ್ಟದ ಚರ್ಚಾ ಸ್ಪರ್ಧೆ "ಕಾಯ್ದೆ ಕಾನೂನುಗಳಿಂದ ಭ್ರಷ್ಟಾಚಾರ ಸಂಪೂರ್ಣವಾಗಿ ತೊಲಗಿಸಲು ಸಾಧ್ಯವೇ,?" ಕಾರ್ಯಕ್ರಮ. "ಕೃಷಿ ಮಂಥನ" ಕೃಷಿ ವಿಷಯ ಕುರಿತು ಡಾಃ ಆರ್.ಕೆ.ಪಾಟೀಲ(ಪ್ರಾಧ್ಯಾಪಕರು ಕೃಷಿ ವಿಶ್ವವಿದ್ಯಾಲಯ" ಇವರಿಂದ ಉಪನ್ಯಾಸ.ಪ್ರಗತಿಪರ ರೈತರಿಗೆ ಸನ್ಮಾನ. ಬೆಳಗಾವಿ ಜಿಲ್ಲಾಮಟ್ಟದ ಕವಿಗೋಷ್ಠಿ. ಮಹಿಳೆಯರಿಗಾಗಿ ರಂಗೋಲಿ ಸ್ಪರ್ಧೆ. ವಿಶೇಷ ಕಾರ್ಯಕ್ರಮ ಯಾರಿಗುಂಟು ಯಾರಿಗಿಲ್ಲ. ಜೊತೆಗೆ ಶಿವನಗೌಡ ಪಾಟೀಲರಿಂದ ಜಾನಪದ ಸಂಭ್ರಮ–ಗೀತಗಾಯನ ಕಾರ್ಯಕ್ರಮಗಳು ಜರುಗಿದವು.

2012 ರಲ್ಲಿ ಮುನವಳ್ಳಿ ಲಕ್ಷಾಧಿಪತಿ.ಬೆಳಗಾವಿ ಜಿಲ್ಲಾ ಮಟ್ಟದ ವಿಜ್ಞಾನ ವಸ್ತು ಪ್ರದರ್ಶನ,ಹುಲಿಕಲ್ ನಟರಾಜ(ದೊಡ್ಡ ಬಳ್ಳಾಪುರ) ಇವರಿಂದ ಪವಾಡ ಬಯಲು ಕಾರ್ಯಕ್ರಮ. ವೃದ್ಧಾಶ್ರಮಗಳು ಬೇಕೆ.? ಕುರಿತು ಜಿಲ್ಲಾ ಮಟ್ಟದ ಚರ್ಚಾಸ್ಪರ್ಧೆ ಹೀಗೆ ಕಳೆದ ಹನ್ನೆರಡು ವರ್ಷಗಳಿಂದ ತನ್ನದೇ ಆದ ಸಾಂಸ್ಕೃತಿಕ ಚಟುವಟಿಕೆಗಳ ಮೂಲಕ ನಾಡಹಬ್ಬ ಉತ್ಸವ ಸಮೀತಿಯವರು ಪ್ರತಿವರ್ಷ ತಪ್ಪದೇ ನಡೆಸಿಕೊಂಡು ಬರುತ್ತಿರುವ ನಾಡಹಬ್ಬ ವಿಶಿಷ್ಟವಾದುದು.[20]

ಹೀಗೆ ಕಳೆದ ಹನ್ನೆರಡು ವರ್ಷಗಳಿಂದ ತನ್ನದೇ ಆದ ಸಾಂಸ್ಕೃತಿಕ ಚಟುವಟಿಕೆಗಳ ಮೂಲಕ ನಾಡಹಬ್ಬ ಉತ್ಸವ ಸಮೀತಿಯವರು ಪ್ರತಿವರ್ಷ ತಪ್ಪದೇ ನಡೆಸಿಕೊಂಡು ಬರುತ್ತಿರುವ ನಾಡಹಬ್ಬ ವಿಶಿಷ್ಟವಾದುದು.

### 4.5 ಅಕ್ಕನ ಬಳಗ

"ಆದ್ಯರ ಅರವತ್ತು ವಚನಕ್ಕೆ ದಣ್ಣಾಯಕರ ಇಪ್ಪತ್ತು ವಚನ.
ದಣ್ಣಾಯಕರ ಇಪ್ಪತ್ತು ವಚನಕ್ಕೆ ಪ್ರಭುದೇವರ ಹತ್ತು ವಚನ.
ಪ್ರಭುದೇವರ ಹತ್ತು ವಚನಕ್ಕೆ ಅಜಗಣ್ಣನ ಐದು ವಚನ
ಅಜಗಣ್ಣನ ಐದು ವಚನಕ್ಕೆ ನಮ್ಮ ಕೂಡಲಸಂಗಯ್ಯನಲ್ಲಿ
ಮಹಾದೇವಿಯಕ್ಕನ ಒಂದು ವಚನ ನಿರ್ವಚನ"

ಈ ಮೇಲಿನ ಮಹಾದೇವಿ ಅಕ್ಕನ ಕುರಿತಾದ ಒಂದು ವಚನ ಮನುಸ್ಮೃತಿಯ " ನ ಸ್ತ್ರೀ ಸ್ವಾತಂತ್ರ್ಯಂ ಅರ್ಹತಿ" ಎನ್ನುವ ಅಹಂಕಾರದ ಪುರುಷ ಧ್ವನಿಗೆ ಜಾಗೃತ ಮಹಿಳೆಯ ವೈಚಾರಿಕ ಪ್ರಜ್ಞೆಯೇ ಉತ್ತರವಾಗಿದೆ.ಸ್ತ್ರೀಯು ಜೀವನದ ವಿವಿಧ ಹಂತಗಳಲ್ಲಿ ಪರಾಧೀನಳು ಎನ್ನುವ ಮಾತನ್ನು ಹೋಗಲಾಡಿಸಿ ಸ್ತ್ರೀಯು ಪುರುಷನಷ್ಟೇ ಪ್ರಜ್ಞಾವಂತಳೆಂದು ತಿಳಿಯಪಡಿಸುತ್ತದೆ. ಬಸವಣ್ಣನವರ ಕಾಲಕ್ಕೆ ಸ್ತ್ರೀ–ಪುರುಷ ಸಮಾನತೆ ಎತ್ತಿ ಹಿಡಿದಿದ್ದು ನಮ್ಮ ಕಣ್ಮುಂದೆ ಇರುವ ಇತಿಹಾಸ.ಆ ಕಾಲಘಟ್ಟದ ಶರಣೆ ಅಕ್ಕಮಹಾದೇವಿಯ ಹೆಸರಿನಲ್ಲಿ ಇಂದಿನ ಮಹಿಳೆಯರು "ಅಕ್ಕನ ಬಳಗ"ವನ್ನು ಸ್ಥಾಪಿಸಿಕೊಂಡು

---

20. ವೈ. ಬಿ. ಕಡಕೋಳ, 'ನಮ್ಮೂರ ನಾಡಹಬ್ಬ' ಹಸಿರುಕ್ರಾಂತಿ ದೀಪಾವಳಿ ವಿಶೇಷಾಂಕ, ಪುಟ 11–17, 2009

ಸಾಮಾಜಿಕ,ಶೈಕ್ಷಣಿಕ, ಧಾರ್ಮಿಕ ಹೀಗೆ ವಿವಿಧ ರಂಗಗಳಲ್ಲಿ ತಮ್ಮದೇ ಆದ ಕೊಡುಗೆಯನ್ನು ನೀಡುತ್ತ ಬಂದಿರುವುದನ್ನು ನಾವಿಂದು ಕಾಣುತ್ತೇವೆ.[21]

ಕರ್ನಾಟಕದಲ್ಲಿ ಮೊಟ್ಟ ಮೊದಲ ಅಕ್ಕನ ಬಳಗ ಪ್ರಾರಂಭವಾದದ್ದು ಪ್ರೊ;ಶಿ.ಶಿಬಸವನಾಳರ ಮನೆಯಲ್ಲಿ ವೀರಶೈವ ಸಮಾಜದ ಮಹಿಳಾ ಸಂಘಟನೆಗಾಗಿ 1936 ರಲ್ಲಿ ಸಭೆಯನ್ನು ಕರೆಯಲಾಗಿತ್ತು ಆ ಸಭೆಯಲ್ಲಿ ಎಲ್ಲ ವೀರಶೈವ ಮಹಿಳೆಯರು ಸೇರಿದ್ದರು.ಆಗ ಶಾಂತಾದೇವಿ ಮಾಳವಾಡ ಅವರು ವಿವಾಹವಾಗಿ ಕಲವೇ ದಿನಗಳಾಗಿದ್ದವು.ಅಲ್ಲಿ ಸೇರಿದ್ದ ಮಹಿಳೆಯರು ಶಾಂತಾದೇವಿಯವರಲ್ಲಿನ ವಚನ ಸಾಹಿತ್ಯ ಸಿದ್ದಾಮತವನ್ನು ಗಮನಿಸಿ ಅವರ ಪತಿ ಶಿ.ಶಿ.ಮಾಳವಾಡರೊಂದಿಗೆ ಚರ್ಚಿಸಿ 1938 ರಲ್ಲಿ ಧಾರವಾಡದಲ್ಲಿ ಶಾಂತಾದೇವಿ ಮಾಳವಾಡರ ನೇತೃತ್ವದಲ್ಲಿ ಅಕ್ಕನ ಬಳಗ ಸ್ಥಾಪಿಸಿದರು.ಅವರ ಕಾರ್ಯ ಚಟುವಟಿಕೆಗಳನ್ನು ಪತ್ರಿಕೆಗಳಲ್ಲಿ ಓದುತ್ತಿದ್ದ ಧಾರವಾಡದ ಸಂಪರ್ಕದಲ್ಲಿದ್ದ ಮುನವಳ್ಳಿಯ ಮಹಿಳೆಯರಿಗೂ ನಮ್ಮೂರಿನಲ್ಲಿ ಅಕ್ಕನ ಬಳಗ ನಾವೂ ಸ್ಥಾಪಿಸಬಹುದು ಎಂಬ ಆಲೋಚನೆ ಬಂದಿದ್ದೇ ತಡ 1956 ರಲ್ಲಿ ಅಕ್ಕಮಹಾದೇವಿ ಮಹಿಳಾ ಮಂಡಲ ಮುನವಳ್ಳಿಯಲ್ಲಿ ಸ್ಥಾಪನೆಯಾಯಿತು.ಅಲ್ಲಿ ಮಹಿಳಾ ಮಂಡಲದ ಕಾರ್ಯ ಚಟುವಟಿಕೆಗಳು ಆರಂಭಗೊಂಡವು. ಕಾಲಕ್ರಮೇಣ ಆ ಸ್ಥಳದಲ್ಲಿ ಕಟ್ಟಡದ ಭಾಗ್ಯವೂ ಕಾಣುವ ಹಂತ ತಲುಪಿತು.

27-6-1977 ಜೂನ ತಿಂಗಳಲ್ಲಿ ಮಹಿಳಾ ಮಂಡಲದ ನೂತನ ಕಟ್ಟಡ ಉದ್ಘಾಟನೆಗೊಂಡಿತು.ಇದನ್ನು ಉದ್ಘಾಟಿಸಿದವರು ಅಂದಿನ ಐ.ಎ.ಎಸ್. ಅಧಿಕಾರಿಗಳಾಗಿದ್ದ ಸಿದ್ದಯ್ಯ ಪುರಾಣಿಕರು.ಆಗ ವಿಮಲಾದೇವಿ.ಶ್ರೀ.ಹಿರೇಮಠ ಅಧ್ಯಕ್ಷರಾಗಿದ್ದರು.16-12-1991 ರ ಡಿಸೆಂಬರ್ ತಿಂಗಳಲ್ಲಿ ಸಂಸ್ಥಾಪಕರಾದ ಅಕ್ಕಮ್ಮಾ ಸಿದ್ದಿಬಾವಿ(ಬಾಳಿ) ಇವರು ಅಕ್ಕನ ಬಳಗದ ಕಲ್ಯಾಣ ಮಂಟಪದ ಸ್ಥಾಪನೆಗೆ ಕಾರಣೀಭೂತರಾದರು.ಆಗ ಅಧ್ಯಕ್ಷರಾಗಿದ್ದವರು ಶ್ರೀಮತಿ ಪಾರ್ವತೆವ್ವ ಪಂ.ಲಂಬೂನವರ.

ರಾಜಕೀಯ ದುರೀಣರಿಂದ ಸಮುದಾಯ ಭವನ ಇನ್ನಿತರೆ ಕಾರ್ಯಗಳನ್ನು ಕೂಡ ಅಕ್ಕನ ಬಳಗ ಕಾಣುವಂತಾಗಿದ್ದು ಇದುವರೆಗೂ ಆಗಿ ಹೋದ ಮಹಿಳಾ ಸದಸ್ಯರೆಲ್ಲರೂ ನಿಸ್ವಾರ್ಥ ಸೇವೆಯಿಂದ ಮುನವಳ್ಳಿಯಲ್ಲಿ ಅಕ್ಕನ ಬಳಗದ ಹೆಸರು ಚಿರಸ್ಥಾಯಿಯಾಗುವಂತೆ ಮಾಡಿದ್ದು ಈಗ ಇತಿಹಾಸ.ಮುನವಳ್ಳಿಯಲ್ಲಿ ಯಾವುದೇ ಕಾರ್ಯಕ್ರಮ ಜರುಗಲಿ ಅಲ್ಲಿ ಅಕ್ಕನ ಬಳಗದ ಸದಸ್ಯರು ತಮ್ಮ ತನು-ಮನ-ಧನದಿಂದ ನಿಸ್ವಾರ್ಥ ಸೇವೆಗೈಯುತ್ತಿರುವುದೇ ಸಾಕ್ಷಿ. 

ಇಂದಿನ ಅಕ್ಕನ ಬಳಗದ ಸದಸ್ಯರು ಕಾರ್ತಿಕ ಮಾಸದಲ್ಲಿ ಮನೆಮನೆಗಳಲ್ಲಿ ಮಹಾಮನೆ ಎಂಬ ಕಾರ್ಯಕ್ರಮದ ಮೂಲಕ ಬಸವತತ್ವ ಪ್ರಚಾರ.ವಚನ ಸಾಹಿತ್ಯದ ಅರಿವು ಮೂಡಿಸುವ ಕಾರ್ಯಕ್ರಮಗಳನ್ನು ಸಂಘಟಿಸುವ ಮೂಲಕ ವಚನ ಸಾಹಿತ್ಯದ ವೈಚಾರಿಕತೆಯನ್ನು ಜನರಿಗೆ ತಿಳಿಸುವ ಕಾರ್ಯವನ್ನು ಮಾಡುತ್ತಿರುವುದು ಶ್ಲಾಘನೀಯವಾದುದು.

---

21. ಶ್ರೀಮತಿ ಎ. ಪಿ. ಲಂಬೂನವರ, ಅಕ್ಕನ ಬಳಗ, ಅಪ್ರಕಟಿತ ಬರಹ

ಮುನವಳ್ಳಿ ಅಕ್ಕನ ಬಳಗದ ಎಲ್ಲ ಸದಸ್ಯರೂ ಸಾಂಸ್ಕೃತಿಕ, ಸಾಂಪ್ರದಾಯಿಕ,ಸಾಮಾಜಿಕ, ನೈತಿಕ, ಹಾಗೂ ವೈಚಾರಿಕ ಪ್ರಜ್ಞೆಯನ್ನು ಸೋಮಶೇಖರ ಮಠದ ಮುರುಘೇಂದ್ರ ಮಹಾಸ್ವಾಮಿಗಳ ಸಲಹೆಯ ಮೇರೆಗೆ ಸದಾ ಸಂಘಟಿಸುತ್ತ ಬರುತ್ತಿದ್ದು ತಮ್ಮದೇ ಆದ ಕೊಡುಗೆಯನ್ನು ನೀಡುತ್ತಿರುವರು.

**4.6 ನೂತನ ವಿಜ್ಞಾನ ವೇದಿಕೆ(ರಿ)**

ವಿಜ್ಞಾನವನ್ನು ಜನಪ್ರೀಯಗೊಳಿಸುವ ವಿದ್ಯಾರ್ಥಿ–ವಿದ್ಯಾರ್ಥಿನಿಯರಲ್ಲಿ ಹಾಗೂ ಸಾರ್ವಜನಿಕರಲ್ಲಿ ವೈಜ್ಞಾನಿಕ ಮನೋಭಾವನೆಯನ್ನು ಬೆಳೆಸುವ ಧ್ಯೇಯಗಳನ್ನು ಹೊಂದಿ 13–8–2004 ರಲ್ಲಿ ನೂತನ ವಿಜ್ಞಾನ ವೇದಿಕೆಯನ್ನು ವಿಜ್ಞಾನ ಶಿಕ್ಷಕರಾದ ಬಿ.ಬಿ.ನಾವಲಗಟ್ಟಿಯವರ ಅದ್ಯಕ್ಷತೆಯಲ್ಲಿ ಕುಮಾರೇಶ್ವರ ಪ್ರೌಢಶಾಲೆಯಲ್ಲಿ ಡಾಃಎ.ಜಿ.ನಾಯಕ್ ರವರು ಉದ್ಘಾಟಿಸುವ ಮೂಲಕ ಅಸ್ತಿತ್ವಕ್ಕೆ ಬಂದಿತು.ಈ ಸಂದರ್ಭದಲ್ಲಿ ಸೋಮಶೇಖರ ಮಠದ ಮುರುಘೇಂದ್ರ ಮಹಾಸ್ವಾಮಿಗಳು.ಮುಖ್ಯ ಅತಿಥಿಗಳಾಗಿ ಬೆಳಗಾವಿಯ ಬಾಪುರಾವ್ ಕಾಕತಕರ ಕಾಲೇಜಿನ ಭೌತಶಾಸ್ತ್ರ ವಿಭಾಗದ ಮುಖ್ಯಸ್ಥರಾದ ಡಾಃಡಿ.ಎನ್.ಮಿಸಾಳೆ ಆಗಮಿಸಿ"ವಿಜ್ಞಾನದಲ್ಲಿ ಆಕಸ್ಮಿಕ ಆವಿಸ್ಕಾರಗಳು"ಎಂಬ ವಿಷಯವಾಗಿ ಅನೇಕ ಘಟನೆಗಳನ್ನು ವಿಜ್ಞಾನ ಹಿನ್ನಲೆಯಲ್ಲಿ ಉದಾಹರಿಸಿ ವಿಜ್ಞಾನದ ಮಹತ್ವವನ್ನು ತಿಳಿಸಿದರು.[22]

ನಂತರದ ದಿನಗಳಲ್ಲಿ ಸರ್ ಮೋಕ್ಷಗುಂಡಂ ವಿಶ್ವೇಶ್ವರಯ್ಯ ಜನ್ಮದಿನಾಚರಣೆ.ವಿಜ್ಞಾನಿಕ ಜಾಗೃತಿ ವರ್ಷಾಚರಣೆ.ಡಾಃಸಿ.ವಿ.ರಾಮನ್ ಜನ್ಮ ದಿನಾಚರಣೆ.ಪವಾಡ ರಹಸ್ಯ ಬಯಲು.ದೈನಂದಿನ ಜೀವನದಲ್ಲಿ ವಿಜ್ಞಾನ.ರಸಪ್ರಶ್ನೆ.ವಿಶ್ವಪರಿಸರ ದಿನಾಚರಣೆ.ವಿಜ್ಞಾನಿ–ವಿದ್ಯಾರ್ಥಿ ನೇರ ಸಂವಾದ.ಬೆಳಗಾವಿ ಜಿಲ್ಲಾ ಮಟ್ಟದ ವಿಜ್ಞಾನ ವಸ್ತು ಪ್ರದರ್ಶನಗಳಂತಹ ಕಾರ್ಯಕ್ರಮಗಳನ್ನು ಹಮ್ಮಿಕೊಂಡು ವಿಜ್ಞಾನ ವಿಷಯದ ಬಗ್ಗೆ ಅರಿವನ್ನು ಮೂಡಿಸುತ್ತ ಸಾಗಿದ್ದು ಒಂದಲ್ಲ ಒಂದು ವಿಭಿನ್ನ ಕಾರ್ಯಕ್ರಮಗಳನ್ನು ಮಕ್ಕಳು, ಶಿಕ್ಷಕರು, ಸಾರ್ವಜನಿಕರಿಗೆ, ವಿಜ್ಞಾನ ವಿಷಯಕ್ಕೆ ಸಂಬಂಧಿಸಿದಂತೆ ಹಮ್ಮಿಕೊಳ್ಳುತ್ತ ಸಾಗಿರುವುದು ಶ್ಲಾಘನೀಯವಾಗಿದೆ.

**4.7. ಅಂಬಾಭವಾನಿ ದೇವಾಲಯದ ನವರಾತ್ರಿ ಉತ್ಸವ**

ಮುನವಳ್ಳಿ ಗ್ರಾಮದ ಮಧ್ಯ ಭಾಗದಲ್ಲಿ ಅಂಬಾಭವಾನಿ ದೇವಾಲಯವಿದೆ. ಇಲ್ಲಿ ಕಳೆದ 6 ವರ್ಷಗಳಿಂದಲೂ ನವರಾತ್ರಯ ಸಂದರ್ಭದಲ್ಲಿ ವಿಭಿನ್ನ ಕಾರ್ಯಕ್ರಮಗಳನ್ನು ಹಮ್ಮಿಕೊಳ್ಳಲಾಗುತ್ತಿದೆ. 9 ದಿನಗಳ ಕಾಲ ದೇವಿ ಪುರಾಣವನ್ನು ಪಾರಾಯಣ ಮಾಡುವ ಜೊತೆಗೆ ನಾಡಿನ ವಿದ್ವಾಂಸರಿಂದ ಪ್ರತಿ ದಿನ ಉಪನ್ಯಾಸ ಕಾರ್ಯಕ್ರಮಗಳನ್ನು ಹಮ್ಮಿಕೊಳ್ಳುವ ಮೂಲಕ ನವರಾತ್ರಿಯನ್ನು ವಿಜೃಂಭಣೆಯಿಂದ ಆಚರಿಸಲಾಗುತ್ತಿದೆ.

**4.8 ಶಿಕ್ಷಣ ಪ್ರೇಮಿ ದಿ. ಜೇವೂರ ಗುರುಗಳು**

ಶಿಕ್ಷಣ ನಿಂತ ನೀರಲ್ಲ, ಅದು ಹರಿಯುವ ನದಿ ಇದ್ದಂತೆ. ಇಂಥ ನದಿಗೆ ಆಣೆಕಟ್ಟು ಕಟ್ಟಿ ಅದರ ನಾನಾ ವಿಧದ ಪ್ರಯೋಜನ ಪಡೆದವರು ಬಹಳ ಕಡಿಮೆ. ಅದಕ್ಕಾಗಿ ತಮ್ಮ ಜೀವನವನ್ನೇ

22. ಸಂದರ್ಶನ, ಬಿ. ಬಿ. ನಾವಲಗಟ್ಟಿ, ವಿಜ್ಞಾನ ಶಿಕ್ಷಕರು, 5–3–2013, ಪುಟ– 49

ಮುಡಿಪಾಗಿಟ್ಟವರು ಇನ್ನೂ ವಿರಳ, ಅಂಥ ಮಹಾನುಭಾವರ ಸ್ಮರಣೆ ಇಂದಿಗೂ ಇರುವುದಾದರೆ ಅದು ಅವರು ನೀಡಿದ ಕೊಡುಗೆಯ ಸ್ಮರಣೆ. ಮುನವಳ್ಳಿಯನ್ನು ಶೈಕ್ಷಣಿಕ, ಧಾರ್ಮಿಕ, ಆರ್ಥಿಕ ಹೀಗೆ ಎಲ್ಲ ಕ್ಷೇತ್ರಗಳಲ್ಲಿಯೂ ತನ್ನದೇ ವೈಶಿಷ್ಟ್ಯ ಹೊಂದಿದ ಸ್ಥಳವಾಗಿದೆ ಇದೇ ಸ್ಥಳದಲ್ಲಿ ಒಂದು ಕಾಲಕ್ಕೆ ಶಿಕ್ಷಣ ಮರೀಚಿಕೆಯಂತಾಗಿದ್ದು ಆ ಸಂದರ್ಭದಲ್ಲಿ ವ್ಹಿ.ಪಿ. ಜೇವೂರ ಗುರುಗಳ ಆಗಮನದಿಂದ ಈ ಭಾಗದ ಜನರಿಗೆ ಶಿಕ್ಷಣ ಮರೀಚಿಕೆ ಎಂಬುದನ್ನು ದೂರ ಮಾಡುವ ಹಾಗಾಯಿತು. ಇಲ್ಲಿಯ ಜೇವೂರ ಗುರುಗಳು ಮತ್ತು ಸರ್ವಿ ಗುರುಗಳು ಸೇರಿ ನದಿಯ ದಡದಲ್ಲಿ ಮರದ ನೆರಳಲ್ಲಿ ಪ್ರೌಢಶಾಲೆ ಪ್ರಾರಂಭಿಸಿದರು. ಶ್ರೀ ಪಂಚಲಿಂಗೇಶ್ವರ ಜನತಾ ಗುರುಕುಲ ಶಿಕ್ಷಣ ಸಂಸ್ಥೆಯನ್ನು ಪ್ರಾರಂಭಿಸಿ ಕ್ಲಿಷ್ಟ ಸಮಯದಲ್ಲಿ ವಿದ್ಯಾದಾನಕ್ಕೆ ಮುಂದಾದರು. ಗ್ರಾಮದಲ್ಲಿ ನಾಟಕ, ವಿವಿಧ ಕಾರ್ಯಗಳ ಮೂಲಕ ದೇಣಿಗೆ ಸಂಗ್ರಹಿಸಿ ಸಂಸ್ಥೆಗೆ ಒಂದು ರೂಪ ನೀಡಿದರು.

ಇಂಥ ಜೇವೂರ ಗುರುಗಳು ನಿಜಕ್ಕೂ ಶ್ರೇಷ್ಠದಾರ್ಶನಿಕರು. 1931 ಜನೇವರಿ 25ರಂದು ಪ್ರಭುದೇವ ಹಾಗೂ ರಾಚಮ್ಮ ದಂಪತಿಗಳಿಗೆ ಮಗನಾಗಿ ಜನ್ಮತಳೆದ ಇವರ ಬಾಲ್ಯ ಶಿಕ್ಷಣ ಬೈಲಹೊಂಗಲದಲ್ಲಿ ಪ್ರೌಢಶಿಕ್ಷಣ ಬೆಳಗಾವಿಯಲ್ಲಿ ಪೂರೈಸಿ ರಾಷ್ಟ್ರೀಯ ಸಂರಕ್ಷಣಾ ಇಲಾಖೆಯಲ್ಲಿ ಸೇವೆಗೆ ಸೇರಿದರು. ನಂತರ ಕಂದಾಯ ಇಲಾಖೆಯಲ್ಲಿ ಕೆಲ ಅವಧಿಗೆ ಸೇವೆ ಸಲ್ಲಿಸಿ ಅದನ್ನು ತ್ಯಜಿಸಿ ಸಮಾಜದ ಎಲ್ಲ ಜಾಡ್ಯಗಳಿಗೆ ದಿವ್ಯ ಔಷಧ ಶಿಕ್ಷಣವೆಂದು ಬಗೆದು ಮುನವಳ್ಳಿಗೆ ಬಂದರು. ಧಾರವಾಡ ತಪೋವನದ ಶ್ರೀ ಕುಮಾರ ಸ್ವಾಮಿಗಳ ಅಂಥಕರಣಕ್ಕೆ ಪಾತ್ರರಾದ ಇವರು ಕನ್ನಡ, ಇಂಗ್ಲೀಷ, ಸಂಸ್ಕೃತ, ಉರ್ದು ಹೀಗೇ ಸಕಲ ಭಾಷಾ ಪ್ರವೀಣರು ಅಷ್ಟೆ ಅಲ್ಲ ಭಾಷೆ, ಸಾಹಿತ್ಯ, ಕಲೆ, ನಾಟಕ ಸಂಗೀತದಲ್ಲಿಯೂ ಪ್ರಭುದ್ದರು ಇವರ ಕನಸಿನ ಜನತಾ ಶಿಕ್ಷಣ ಪ್ರಸಾರಕ ಸಂಸ್ಥೆ ಇಂದು ಮುನವಳ್ಳಿಯಲ್ಲಿ ಹೆಮ್ಮರವಾಗಿ ಬೆಳೆದು ನಿಂತಿದೆ.

ಅಷ್ಟೇ ಅಲ್ಲ ಬಡಜನರ ಕಲ್ಯಾಣಕ್ಕಾಗಿ ಭಾರತೀಯ ಗ್ರಾಮೀಣ ಶಿಕ್ಷಣ ಪ್ರಸಾರಕ ಸಂಸ್ಥೆ ಹುಟ್ಟು ಹಾಕಿದರು. ಗಂಧರ್ವ ಸಂಗೀತ ಸರೋವರ ಪಾಠಶಾಲೆ, ದಲಿತ ಜಾಗೃತಿ ಸಂಸ್ಕೃತ ಪಾಠಶಾಲೆ ಸ್ಥಾಪಿಸಿದರು. ಮಾವೋ,ಲೆನಿನ್, ಟ್ಯಾಗೋರ ಮತ್ತು ಬಸವಣ್ಣನವರ ವಿಚಾರಧಾರೆ ಬದುಕಿನಲ್ಲಿ ಅಳವಡಿಸಿಕೊಂಡಿದ್ದ ಇವರು ತಮ್ಮ ಅಂತ್ಯಕಾಲದವರೆಗೂ ಶಿಕ್ಷಣದ ಚಿಂತನೆಗಾಗಿ ಬದುಕನ್ನು ರೂಪಿಸಿದರು. ಬಡಮಕ್ಕಳಿಗೆ ಇಂಗ್ಲೀಷ ಕಲಿಕೆಯಾಗಲಿ ಉನ್ನತ ವ್ಯಾಸಂಗ ಸಿಗಲಿ ಎಂದು ತಮ್ಮ ಮನೆಯಲ್ಲಿಯೇ ಇಂಗ್ಲೀಷ ಭಾಷಾಂತರ ಪಾಠಮಾಲೆ,ಪ್ರಾರಂಭಿಸಿ ಪುಸ್ತಕ ಕೂಡ ಉಚಿತವಾಗಿ ನೀಡಿ ತಾವೇ ಬೋಧಿಸುವ ಮೂಲಕ ಅಂಥ ವಿದ್ಯಾರ್ಥಿಗಳಿಂದೂ ನಾಡಿನೆಲ್ಲಡೆ ಮುನವಳ್ಳಿಯ ಖ್ಯಾತಿ ಬೆಳೆಸಿ ಉನ್ನತ ಹುದ್ದೆಗಳಲ್ಲಿ ಇರುವುದು ಸ್ಮರಣಾರ್ಹ.

ಇಂಥ ಮಹಾನುಭಾವರ ಸ್ಮರಣೆಗೆಂದೆ ಮುನವಳ್ಳಿಯಲ್ಲಿ ದಿವಂಗತ ವ್ಹಿ.ಪಿ.ಜೇವೂರ ಗುರುಗಳ ಸ್ಮಾರಕ ಪ್ರತಿಷ್ಠಾನವನ್ನು ಅವರ ವಿದ್ಯಾರ್ಥಿಗಳು, ಅಭಿಮಾನಿಗಳು, ಹಿತೈಷಿಗಳು ಸೇರಿ ಹದಿಮೂರು ವರ್ಷದ ಹಿಂದೆ(1999) ಸ್ಥಾಪಿಸಿದರು. ಅಷ್ಟೇ ಅಲ್ಲ ಪ್ರತಿವರ್ಷ ಜನವರಿ 25 ರಂದು ಆ ಸ್ಮರಣೆಯ ನೆನಪಿನಲ್ಲಿ ಅಂದು ಕಲಿತ ಹಾಗೂ ಇಂದು ಕಲಿಯುತ್ತಿರುವ ಸಂಸ್ಥೆಯ

ವಿದ್ಯಾರ್ಥಿಗಳನ್ನು ಸನ್ಮಾನಿಸಿ ಅವರ ಸಾಧನೆ ಮುನವಳ್ಳಿ ಜನತೆಗೆ ಪರಿಚಯ ಮಾಡಿಸುವ ಜೊತೆಗೆ ವಿವಿಧ ಕ್ಷೇತ್ರಗಳಲ್ಲಿ ಸೇವೆ ಸಲ್ಲಿಸುತ್ತಿರುವ ಈ ಸಂಸ್ಥೆಯಲ್ಲಿ ಕಲಿತು ಹೆಸರುವಾಸಿಗಳಾದವರ ಸನ್ಮಾನ ನಡೆಸುವ ಮೂಲಕ ಜೇವೂರ ಗುರುಗಳ ಸ್ಮರಣೆ ಮಾಡುತ್ತಿರುವುದು ನಿಜಕ್ಕೂ ಸ್ಮರಣೀಯವಾಗಿದೆ.

ಇದೇ ಜನೆವರಿ 25 2013 ರಂದು ಹದಿಮೂರನೇ ವರ್ಷದ ಸಮಾರಂಭವನ್ನು ಅದ್ದೂರಿಯಾಗಿ ಆಚರಿಸಲಾಗಿದ್ದು, ಇಂಥ ಮಹಾನ್‌ಚೇತನದ ಸ್ಮರಣೆ ಶೈಕ್ಷಣಿಕ ರಂಗಕ್ಕೆ ಅವರ ಕೊಡುಗೆಗೆ ಹಿಡಿದ ಕೈಗನ್ನಡಿ. ಇವರ ಬದುಕಿನ ಆದರ್ಶಗಳು, ಜೀವನ ತತ್ವಗಳು ಇಂದಿನ ವಿದ್ಯಾರ್ಥಿಗಳಿಗೆ ಕೂಡ ಮಾರ್ಗದರ್ಶಕವಾಗಲಿ ಎಂದು ಈ ಸಂದರ್ಭದಲ್ಲಿ ಹಾರೈಸಿ ಕಾರ್ಯಕ್ರಮದ ರೂವಾರಿಗಳಾದ ಶಿಷ್ಯ ದಿಲೀಪ.ವಾಯ್.ಜಂಬಗಿ ಮತ್ತು ಮಲ್ಲಿಕಾರ್ಜುನ ಗೋಮಾಡಿಯವರ ಈ ಶಿಷ್ಯರು ಜೇವೂರ ಗುರುಗಳ ಸ್ಮರಣೋತ್ಸವ ಸಮೀತಿ ಹುಟ್ಟು ಹಾಕುವ ಜೊತೆಗೆ ಪ್ರತಿ ವರ್ಷ ಅದನ್ನು ವಿಭಿನ್ನವಾಗಿ ಆಚರಿಸಿಕೊಂಡು ಬರುತ್ತಿರುವುದು ಇತರರಿಗೂ ಮಾದರಿ.[23]

**4.9 ಪತ್ರಿಕಾರಂಗದ ಹಿರಿಯ ಚೇತನ ಮಲ್ಲೇಶಪ್ಪ ಪರಪ್ಪ ಬಡೆಮ್ಮಿ**

ಬೆಳಗಾವಿ ಜಿಲ್ಲೆಯ ಸವದತ್ತಿ ತಾಲೂಕಿನ ಮುನವಳ್ಳಿ ಇಂದು ತನ್ನದೇ ಆದ ಐತಿಹಾಸಿಕ, ಹಾಗೂ ಕೈಗಾರಿಕಾ (ಸಕ್ಕರೆ ಕಾರ್ಖಾನೆ) ಕ್ರಾಂತಿಯ ಮೂಲಕ ಜಿಲ್ಲೆಯಲ್ಲಿಯೇ ಹೆಸರುವಾಸಿಯಾದ ಗ್ರಾಮವಾಗಿದೆ.ಪತ್ರಿಕೋದ್ಯಮದಲ್ಲಂತೂ ಪ್ರತಿದಿನವೂ ವಿನೂತನ ಸುದ್ದಿಗಳ ಮೂಲಕ ಮುನವಳ್ಳಿ ಶೈಕ್ಷಣಿಕ, ಧಾರ್ಮಿಕ, ರಾಜಕೀಯ, ಸಾಂಸ್ಕೃತಿಕ ಮುಂತಾದ ವಿಷಯಗಳಲ್ಲಿ ಗಮನ ಸೆಳೆಯುತ್ತಿದೆ. ಇಂಥ ಮುನವಳ್ಳಿ ಗ್ರಾಮದಲ್ಲಿ ಪತ್ರಿಕಾ ವಿತರಕರಾಗಿ ತಮ್ಮ ಮನೆತನವನ್ನು ಇಂದಿಗೂ ಚಾಲನೆಯಲ್ಲಿಟ್ಟುಕೊಂಡು ಬಂದ ಕುಟುಂಬವೊಂದಿದೆ.ಅವರೇ ಮಲ್ಲೇಶಪ್ಪ,ಪರಪ್ಪ,ಬಡೆಮ್ಮಿಯವರು.

ಮುನವಳ್ಳಿಗೆ ಇಂದು ರಾಜ್ಯದಲ್ಲಿ ಪ್ರಕಟವಾಗುವ ಎಲ್ಲ ಜನಪ್ರೀಯ ದಿನಪತ್ರಿಕೆ, ವಾರಪತ್ರಿಕೆ, ಮಾಸಪತ್ರಿಕೆ, ಪಾಕ್ಷಿಕ ಪತ್ರಿಕೆ ಗಳೂ ಬರುತ್ತಿವೆ. ಅನೇಕ ವಿತರಕರು ಇಂದು ಪತ್ರಿಕೋದ್ಯಮದಲ್ಲಿ ತಮ್ಮನ್ನು ತೊಡಗಿಸಿಕೊಂಡಿದ್ದು,ವರದಿಗಾರರು ಕೂಡ ಇರುವರು.ಆದರೆ ಸ್ವಾತಂತ್ರ್ಯಪೂರ್ವ ಕಾಲದಿಂದಲೂ ತಮ್ಮ ಅಂಚೆ ವಿತರಣಾ ಕಾರ್ಯದ ಜೊತೆಗೆ ಪತ್ರಿಕೆಗಳ ವಿತರಣೆ ಮಾಡುತ್ತ ಬಂದಿರುವ ಮಲ್ಲೇಶಪ್ಪ.ಪರಪ್ಪ.ಬಡೆಮ್ಮಿಯವರು ಇಂದು ತಮ್ಮ ಮಕ್ಕಳನ್ನೂ ಕೂಡ ಆ ಕಾರ್ಯದಲ್ಲಿ ತೊಡಗಿಸುವ ಮೂಲಕ ಪತ್ರಿಕೋದ್ಯಮದ ನಂಟನ್ನು ಉಳಿಸಿಕೊಂಡು ಬಂದಿರುವ ಹಿರಿಯ ಚೇತನ.

ಮಲ್ಲೇಶಪ್ಪ ಬಡೆಮ್ಮಿಯವರು ಜನಿಸಿದ್ದು 13-6-1927 ರಲ್ಲಿ.ಬಡತನ ಹೆಚ್ಚಿನ ವ್ಯಾಸಂಗಕ್ಕೆ ಅನುಕೂಲ ಮಾಡದಿದ್ದರಿಂದ ಅಂದಿನ ನಾಲ್ಕನೇ ತರಗತಿವರೆಗೆ ಶಿಕ್ಷಣ ಪಡೆದು ಕೇವಲ ತಿಂಗಳಿಗೆ ಇಪ್ಪತ್ತೇಳು ರೂಪಾಯಿಗಳ ವೇತನದಲ್ಲಿ ಅಂಚೆ ಇಲಾಖೆಯಲ್ಲಿ ಪತ್ರ ವಿತರಕರಾಗಿ ಬದುಕನ್ನು ಅವಲಂಬಿಸಿ,ಅದರ ಜೊತೆಗೆ 1946 ರಲ್ಲಿ ಅಂದು ಜನಪ್ರೀಯವಾಗಿದ್ದ "ವಿಶಾಲ ಕರ್ನಾಟಕ"(ಬೆಲೆ 50 ಪೈಸೆ) ವಿತರಕರಾಗಿ ಪತ್ರಿಕಾ ನಂಟು ಬೆಳೆಸಿಕೊಂಡವರು. ಇವರು ಶಿಂದೋಗಿ, ಹಳ್ಳೂರು.

---

23. ವೈ. ಬಿ. ಕಡಕೋಳ, 'ಶಿಕ್ಷಣ ಪ್ರೇಮಿ ಜೇವೂರ ಗುರುಗಳು', ಕನ್ನಡಮ್ಮ ದಿನಪತ್ರಿಕೆ, 25-1-2010, ಪುಟ - 6

ಹಿರೂರು.ಬಂಡ್ರೋಳ್ಳಿ, ತರೆದಕೊಪ್ಪ, ಬೋಚಬಾಳ, ಯಕ್ಕೇರಿ, ಕಟಮಳ್ಳಿ, ಗೊರವನಕೊಳ್ಳ ಗ್ರಾಮಗಳಿಗೆ ಅಂಚೆ ವಿತರಿಸುತ್ತ ಜೊತೆಗೆ ಪತ್ರಿಕೆ ವಿತರಿಸುವ ಮೂಲಕ ಪತ್ರಿಕೋದ್ಯಮದಲ್ಲಿ ತಮ್ಮ ಕಾರ್ಯ ಮಾಡತೊಡಗಿದರು.

ಅಂದು ಮುನವಳ್ಳಿಯಲ್ಲಿ ಕೇವಲ ಇಬ್ಬರೇ ಪತ್ರಿಕಾ ಪ್ರತಿನಿಧಿಗಳು ಇದ್ದರು. ಆದರೆ ಇಂದು ಹಲವಾರು ಜನ ಪತ್ರಿಕೋದ್ಯಮದಲ್ಲಿ ಬೆಳೆಯುತ್ತಿದ್ದಾರೆ ಇದನ್ನು ಕಂಡರೆ ಸಂತೋಷವಾಗುತ್ತದೆ ಎನ್ನುವ ಇವರು ಅಂದಿನ ಕಾಲದಲ್ಲಿ ಸೈಕಲ್ ಮೇಲೆ ಹಳ್ಳಿ ಹಳ್ಳಿಗಳಿಗೆ ಅಂಚೆ ವಿತರಿಸಲು ಸಂಚರಿಸುತ್ತಿದ್ದು ಅಂದು ಸಂಯುಕ್ತ ಕರ್ನಾಟಕ ಹಾಗೂ ವಿಸಾಲ ಕರ್ನಾಟಕ ಎರಡೂ ಪತ್ರಿಕೆಗಳು ಜನಪ್ರೀಯವಾಗಿದ್ದವು ಅದರಲ್ಲೂ ವಿಶಾಲ ಕರ್ನಾಟಕ ತನ್ನ ಮೊಣಚು ಬರವಣಿಗೆಯ ಮೂಲಕ ಅನೇಕ ಓದುಗರನ್ನು ಗಳಿಸಿತ್ತು ಎಂಬುದನ್ನು ನೆನೆಯುತ್ತಾರೆ.

ಅಂಚೆ ಇಲಾಖೆಯವರು ಇವರನ್ನು ಯಾದವಾಡಕ್ಕೆ ವರ್ಗಾವಣೆ ಮಾಡಿದಾಗ ಮನೆತನದ ಜವಾಬ್ದಾರಿ ಜೊತೆಗೆ ದೂರದ ಸ್ಥಳಕ್ಕೆ ಹೋಗಿ ಇದ್ದು ಕಾರ್ಯ ಮಾಡಲು ತೊಂದರೆಯಾಗುತ್ತದೆ ಎಂದುಕೊಂಡು ಅಂಚೆ ಇಲಾಖೆ ಸೇವೆಯನ್ನು ತ್ಯಜಿಸಿ ಪತ್ರಿಕಾರಂಗದಲ್ಲಿ ತಮ್ಮನ್ನು ತೊಡಗಿಸಿಕೊಂಡ ಬಡೆಮ್ಮಿಯವರು ವಿಶಾಲ ಕರ್ನಾಟಕದ ಜೊತೆಗೆ ಪ್ರಜಾಮತ(50 ಪೈಸೆ) ವಾರಪತ್ರಿಕೆ,ಚಂದಮಾಮ (6 ಅಣೆ)ಮಕ್ಕಳ ಪತ್ರಿಕೆ,ನಂತರ ಪ್ರಜಾವಾಣಿ ದಿನಪತ್ರಿಕೆ,ಹೀಗೆ ಪತ್ರಿಕೆಗಳ ವಿತರಕರಾಗಿ ಬದುಕನ್ನು ಕಟ್ಟಿಕೊಳ್ಳುವ ಮೂಲಕ ಪತ್ರಿಕಾರಂಗದಲ್ಲಿ ತಮ್ಮನ್ನು ತೊಡಗಿಸಿಕೊಂಡರು.ಅಂಚೆ ಇಲಾಖೆಯಲ್ಲಿದ್ದಾಗ ತರುಣ ಕರ್ನಾಟಕ ಪತ್ರಿಕೆಯನ್ನು ಅಂಚೆ ಮೂಲಕ ತರಿಸಿಕೊಳ್ಳುತ್ತಿದ್ದರಂತೆ ಹೀಗೆ ಅಂಚೆ ಮೂಲಕವೂ ಪತ್ರಿಕೆ ತರಿಸುವ ನನಗೆ ಮುನವಳ್ಳಿಯಲ್ಲಿ ಓದುಗರು ಸ್ಪಂದಿಸಿದ ರೀತಿ ನಿಜಕ್ಕೂ ಸ್ಮರಣೀಯ,

ಮುನವಳ್ಳಿ ಹಾಗೂ ಸುತ್ತಮುತ್ತಲಿನ ಗ್ರಾಮಗಳಲ್ಲಿ ವಾಸಿಸುತ್ತಿದ್ದ ಶಿಕ್ಷಕರು,ರಾಜಕೀಯ ವ್ಯಕ್ತಿಗಳು,ಸ್ವಾತಂತ್ರ್ಯ ಹೋರಾಟಗಾರರು ಕೃಷಿಕರು,ವ್ಯಾಪಾರಿಗಳು ಪತ್ರಿಕೆಗಳನ್ನು ಕೊಂಡು ಓದುವ ಮೂಲಕ ನನ್ನಲ್ಲಿ ಈ ಪತ್ರಿಕೆಗಳ ನಂಟನ್ನು ಪ್ರೋತ್ಸಾಹಿಸಿದರು ಎಂದು ಓದುಗರನ್ನು ನೆನೆಯುತ್ತಾರೆ.ಇವರಿಗೆ ಆರು ಜನ ಗಂಡು ಮಕ್ಕಳು ಓರ್ವ ಹೆಣ್ಣು ಮಗಳು ತುಂಬು ಕುಟುಂಬದ ಸಂಸಾರಿಕ ಜೀವನ ಸಾಗಿಸುತ್ತಿರುವ ಇವರು ತಮ್ಮ ಮಕ್ಕಳನ್ನು ಕೂಡ ಪತ್ರಿಕಾ ವಿತರಕರಾಗಿ ಪತ್ರಿಕೆಗಳ ನಂಟನ್ನು ನೀಡುವ ಮೂಲಕ ತಮ್ಮ ಪತ್ರಿಕಾ ಪ್ರೀತಿಯನ್ನು ಮೆರೆದಿದ್ದು. ಇಂದು ಇವರ ಮಕ್ಕಳಾದ ಬಸವರಾಜ ಹಾಗೂ ಅಶೋಕ ಈ ಕಾರ್ಯವನ್ನು ಮುನ್ನಡೆಸುತ್ತಿದ್ದು ಇಂದು ಪ್ರಜಾವಾಣಿ ಜೊತೆಗೆ ಸುಧಾ,ಮಯೂರ, ಚಂದಮಾಮ, ಕನ್ನಡಮ್ಮ, ಮಂಗಳ, ಚುಟುಕು, ಬಾಲಮಂಗಳ, ಗೃಹಶೋಭಾ ಹೀಗೆ ಅನೇಕ ಪತ್ರಿಕೆಗಳ ವಿತರಕರಾಗಿ ಅವರ ಮನೆತನವೇ ಈ ಪತ್ರಿಕಾ ನಂಟನ್ನು ಉಳಿಸಿಕೊಂಡು ಬಂದಿದ್ದು ನಿಜಕ್ಕೂ ಶ್ಲಾಘನೀಯ.

ಅವರ ಮೊಮ್ಮಕ್ಕಳೂ ಕೂಡ ಪತ್ರಿಕೆ ನಂಟನ್ನು ಹೊಂದಿದ್ದು ಈ ಇಳಿ ವಯಸ್ಸಿನ ಪತ್ರಿಕೋದ್ಯಮಿಯನ್ನು ಸವದತ್ತಿ ತಾಲೂಕಿನ ಕಾರ್ಯನಿರತ ಪತ್ರಕರ್ತರ ಸಂಘದ ಆಶ್ರಯದಲ್ಲಿ ಕೆ.ಶಿವಾಪುರದಲ್ಲಿ ದಿನಾಂಕ 17-7-2011 ಜರುಗಿದ ಪತ್ರಿಕಾ ದಿನಾಚರಣೆಯ ಸಂದರ್ಭದಲ್ಲಿ

ಐವರು  ಹಿರಿಯ ಪತ್ರಿಕರ್ತರೊಡನೆ ಸನ್ಮಾನಿಸುವ ಮೂಲಕ ಇವರ ಸೇವೆಯನ್ನು ಸ್ಮರಿಸಿದ್ದು ಶ್ಲಾಘನೀಯ.

ಸವದತ್ತಿ ತಾಲೂಕಿನ ಕಾರ್ಯನಿರತ ಪತ್ರಕರ್ತರ ಸಂಘದ ಅಧ್ಯಕ್ಷ ಪುಂಡಲೀಕ ಬಾಳೋಜಿಯವರ ನೇತೃತ್ವದಲ್ಲಿ ಶಿವಾಪುರದಲ್ಲಿ ಜರುಗಿದ ಈ ಕಾರ್ಯಕ್ರಮದಲ್ಲಿ ಜಿಲ್ಲಾ ಪಂಚಾಯತಿ ಅದ್ಯಕ್ಷರಾದ ಈರಣ್ಣ, ಕಡಾಡಿ, ಸವದತ್ತಿಯ ಜನಪ್ರೀಯ ಶಾಸಕರಾದ ವಿಶ್ವನಾಥ(ಆನಂದ), ಚಂದ್ರಶೇಖರ, ಮಾಮನಿ, ರಾಜ್ಯ ಕಾರ್ಯನಿರತ ಪತ್ರಕರ್ತರ ಸಂಘದ ಉಪಾಧ್ಯಕ್ಷರಾದ ಬಾಬು,ಸುಂಕದ, ಜಿಲ್ಲಾ ಪ್ರಧಾನ ಕಾರ್ಯದರ್ಶಿ ದಿಲೀಪ,ಕುಂದರವಾಡಿ,ಸವದತ್ತಿ ತಾಲೂಕಿನ ಎಪಿಎಂಸಿ ಅದ್ಯಕ್ಷರಾದ ಬಸಯ್ಯ,ಹಿರೇಮಠ,ತಾಲೂಕ ಪಂಚಾಯತ ಅದ್ಯಕ್ಷರಾದ ಪರ್ವತಗೌಡ, ಪಾಟೀಲ, ಜಿಲ್ಲಾ ಪಂಚಾಯತಿ ಸದಸ್ಯೆ ವಿದ್ಯಾರಾಣಿ.ಸೊನ್ನದ,ಕಡಬಿ ಸಿದ್ದಾರೂಡ ಮಠದ ಸಿದ್ದಾನಂದ ಸ್ವಾಮೀಜಿ,ನಿವೃತ್ತ ರಾಜ್ಯ ಪ್ರಶಸ್ತಿ ವಿಭೂಷಿತ ಶಿಕ್ಷಕ ಎಚ್.ಬಿ.ಅಸೂಟಿ,ಸವದತ್ತಿ ತಾಲೂಕಿನ ಕ್ಷೇತ್ರ ಶಿಕ್ಷಣಾಧಿಕಾರಿಗಳಾದ ಶ್ರೀಶೈಲ.ಚ.ಕರೀಕಟ್ಟಿ.ಸ್ಥಳೀಯ ಗ್ರಾಮ ಪಂಚಾಯತಿ ಅಧ್ಯಕ್ಷ,ಸದಸ್ಯರು, ಗಣ್ಯ ನಾಗರಿಕರು,ಶಿಕ್ಷಕರು ಉಪಸ್ಥಿತರಿದ್ದು ಕಾರ್ಯಕ್ರಮವನ್ನು ಅರ್ಥಪೂರ್ಣ ಆಚರಣೆಯನ್ನಾಗಿಸುವ ಮೂಲಕ ಪತ್ರಿಕೆಗಳ ಕುರಿತು ಪತ್ರಿಕೋದ್ಯಮ ಕುರಿತು ಗಣ್ಯರು ಮಾತನಾಡಿದರು.

ಇಂದಿಗೂ ಕೂಡ ಮುನವಳ್ಳಿಯಲ್ಲಿ ಇವರ ಮಕ್ಕಳು ತಂದೆಯ ಕಾರ್ಯವನ್ನು ಮುನ್ನಡೆಸಿಕೊಂಡು ಬರುತ್ತಿರುವುದು ಶ್ಲಾಘನೀಯ ಕಾರ್ಯವಾಗಿದೆ.ಇಂದು ಬೇರೆ ಬೇರೆ ಪತ್ರಿಕೆಗಳ ವಿತರಕರು ಬೆಳೆಯುತ್ತಿದ್ದರೂ ಕೂಡ ಮುನವಳ್ಳಿಯಲ್ಲಿ ಬಡೆಮ್ಮಿಯವರ ಪತ್ರಿಕಾ ವಿತರಣೆ ಕಾರ್ಯ ಎಂದಿನಂತೆ ನಡೆಯುತ್ತಿರುವುದು ತಂದೆಯ ಕಾರ್ಯವನ್ನು ಮಕ್ಕಳೂ ಬೆಳೆಸಿಕೊಂಡು ಬರುತ್ತಿರುವ ಮೂಲಕ ಪತ್ರಿಕಾ ಕಾರ್ಯದಲ್ಲಿ ಬಡೆಮ್ಮಿಯವರ ಕುಟುಂಬದ ಕಾರ್ಯ ಇತರರಿಗೂ ಮಾದರಿಯಾಗಿದೆ.

ಇನ್ನುಳಿದಂತೆ ಕಟಕೋಳ ಗ್ರಾಮದಿಂದ ಬಂದ ತಾನಾಜಿರಾವ್ ಮೊರಂಕರ್ ಕೂಡ ಪತ್ರಿಕಾ ರಂಗದಲ್ಲಿ ತಮ್ಮದೇ ಖ್ಯಾತಿಗಳಿಸಿದ್ದು ಇಂದು ಅವರು ಸಂಯುಕ್ತ ಕರ್ನಾಟಕ ದಿನಪತ್ರಿಕೆಯ ಜೊತೆಗೆ ಅನೇಕ ಪತ್ರಿಕೆಗಳನ್ನು ವಿತರಿಸುವ ಮೂಲಕ ತಾಲೂಕಾ ಕಾರ್ಯನಿರತ ಪತ್ರಕರ್ತರ ಸಂಘಟನೆಯ ಕಾರ್ಯದರ್ಶಿಯಾಗಿ ಇತ್ತೀಚೆಗಷ್ಟೆ(2013) ತಮ್ಮ ವೈವಾಹಿಕ ಜೀವನದ 25 ವರ್ಷಗಳ ಕಾರ್ಯಕ್ರಮವನ್ನು ಕೂಡ ಪತ್ರಕರ್ತರ ಸಂಘಟನೆಯ ಜೊತೆಗೆ ಆಚರಿಸಿಕೊಳ್ಳುವ ಮೂಲಕ ಮುನವಳ್ಳಿಯಲ್ಲಿ ಮೊರಂಕರ ಕುಟುಂಬ ಪತ್ರಿಕಾ ಸೇವೆಯಲ್ಲಿ ತೊಡಗಿದ್ದು ಪ್ರಶಾಂತ ತುಳಜಣ್ಣವರ.ವೀರಣ್ಣ ಕೊಳಕಿ ಶಿಕ್ಷಕರ ಮಗ. ಗಂಗಾವತಿಯವರ ಪುತ್ರ ಹೀಗೆ ಅನೇಕರು ಕೂಡ ಪತ್ರಿಕಾ ರಂಗದಲ್ಲಿ ಸೇವೆ ಸಲ್ಲಿಸುತ್ತಿರುವರು.

ಗಂಗಾವತಿಯವರು ಮುನವಳ್ಳಿಯಿಂದ "ಮಂಗೇಶ್ ಪತ್ರಿಕೆ"ಯನ್ನು ಹೊರಡಿಸುತ್ತಿದ್ದರು ಅವರ ನಿಧನಾ ನಂತರ ಅವರ ಮಗ ಕೂಡ ಪತ್ರಿಕೆ ಹೊರಡಿಸುತ್ತಿರುವನು ಇತ್ತೀಚಿನ ದಿನಗಳಲ್ಲಿ ಪತ್ರಿಕೆಗಳು ನಡೆಯುವುದೇ ಅಪರೂಪವಾಗುತ್ತಿದ್ದು ಕೊಂಡು ಓದುವವರ ಸಂಖ್ಯೆ ವಿರಳವಾಗಿದೆ ಆದರೂ

ಮುನವಳ್ಳಿ ಗ್ರಾಮದ ಪತ್ರಿಕಾಕರ್ತರು ತಮ್ಮದೇ ಆದ ಕೊಡುಗೆಯನ್ನು ನೀಡುತ್ತಿರುವುದು ಶ್ಲಾಘನೀಯವಾಗಿದೆ.[24]

### 4.10 ಗ್ರಾಮೀಣ ಛಾಯಾಗ್ರಹಣದಲ್ಲಿ ಬಸವರಾಜ ಪೋಟೋ ಸ್ಟುಡಿಯೋ

ಮುನವಳ್ಳಿ ಗ್ರಾಮದಲ್ಲಿ ಬಝಾರ ರಸ್ತೆಯಲ್ಲಿ ಬಸವರಾಜ ಪೋಟೋ ಸ್ಟುಡಿಯೋ ಎಂಬುದು ಕಳೆದ ನಲವತ್ತು ವರ್ಷಗಳಿಂದಲೂ ಛಾಯಾಗ್ರಹಣ ಕಾರ್ಯದಲ್ಲಿ ಉಳಿದುಕೊಂಡು ಬಂದಿರುವ ಸ್ಟುಡಿಯೋ ಇದಾಗಿದ್ದು ಇದರ ಮಾಲೀಕರು ಇಂದು ನಮ್ಮೊಂದಿಗೆ ಇಲ್ಲ ಅವರ ವ್ಯಕ್ತಿತ್ವ ಅವರು ಅಂದು ತೆಗೆದಿರುವ ಛಾಯಾಚಿತ್ರಗಳು ಜೊತೆಗೆ ಸ್ಟುಡಿಯೋ ತೆರೆದು ತಮ್ಮ ಮಕ್ಕಳಿಗೂ ಬಳುವಳಿಯಾಗಿ ಉಳಿಸಿದ್ದು ದಾಖಲಾರ್ಹ ಸಂಗತಿ.

ದಿವಂಗತ ಚನ್ನಬಸಪ್ಪ,ಬಸವಣ್ಣೆಪ್ಪ,ತುಳಜಣ್ಣವರ ಇವರು ತಮ್ಮ ವೃತ್ತಿಯನ್ನು ಹವ್ಯಾಸಿ ಛಾಯಾಗ್ರಹಣದಲ್ಲಿ ತೊಡಗಿಸಿಕೊಂಡು 1977 ರಿಂದಲೇ ಪೋಟೋ ತಗೆಯುವ ಹವ್ಯಾಸವನ್ನು ಬದುಕಿನಲ್ಲಿ ರೂಡಿಸಿಕೊಂಡು ಕೈಯಲ್ಲೊಂದು ಕ್ಯಾಮರಾ ಹಿಡಿದು ಪರಿಸರ, ಸಾಮಾಜಿಕ, ರಾಜಕೀಯ, ಧಾರ್ಮಿಕ ಒಂದಲ್ಲ ಒಂದು ಚಟುವಟಿಕೆಗಳಲ್ಲಿ ಭಾಗವಹಿಸುತ್ತ ಅವುಗಳನ್ನು ಛಾಯಾಚಿತ್ರ ತಗೆದು ಸಂಬಂಧಿಸಿದವರ ಕೈಗೆ ನೀಡುತ್ತ ತಾವು ಒಬ್ಬ ಛಾಯಾಚಿತ್ರಕಾರರಾಗಿ ಗುರುತಿಸಲ್ಪಟ್ಟರು.ಇವರು ಕ್ರಮೇಣ ಮುನವಳ್ಳಿ ಹಾಗೂ ಸುತ್ತ ಮುತ್ತಲಿನ ಸ್ಥಳಗಳಿಗೆ ಭೇಟಿ ನೀಡುವ ರಾಜಕಾರಣಿಗಳ ಚಲನಚಿತ್ರ ನಟನಟಿಯರ ಭಾವಚಿತ್ರಗಳನ್ನು ತೆಗೆಯುವ ಮೂಲಕ ಹವ್ಯಾಸಿ ಛಾಯಾಚಿತ್ರಕಾರರಾಗಿ ಬೆಳೆಯತೊಡಗಿದರು.

ಇವರು ಚಿತ್ರಿಸಿದ ಭಾವಚಿತ್ರಗಳಲ್ಲಿ ಪ್ರಮುಖವಾದವುಗಳೆಂದರೆ ಈ ದೇಶದ ಮಾಜಿ ಉಪರಾಷ್ಟ್ರಪತಿ ಬಿ.ಡಿ.ಜತ್ತಿ, ಇಂದಿರಾಗಾಂಧಿ, ರಾಜೀವಗಾಂಧಿ, ಆರ್. ಗುಂಡೂರಾವ್ ಮೊದಲಾದ ಗಣ್ಯರು ಸವದತ್ತಿ ತಾಲೂಕಿಗೆ ಭೇಟಿ ನೀಡಿದ ಸ್ಮರಣೀಯ ಕ್ಷಣಗಳನ್ನು ತಮ್ಮ ಕ್ಯಾಮರಾದಲ್ಲಿ ಸೆರೆಹಿಡಿದು ಅಂದಿನ ತಮ್ಮ ಹಳೆಯ ಸ್ಟುಡಿಯೋದಲ್ಲಿ ಕಪ್ಪು ಬಿಳುಪಿನಲ್ಲಿ ದೊಡ್ಡ ಆಕಾರದಲ್ಲಿ ಪ್ರದರ್ಶಿಸುವ ಮೂಲಕ ತಮ್ಮ ಛಾಯಾಗ್ರಹಣದ ಸೆಲೆಯನ್ನು ಬಿಂಬಿಸಿದರು.ಗ್ರಾಮೀಣ ಭಾಗದಲ್ಲಿ ಅಂದಿನ ಕಾಲದಲ್ಲಿ ಸ್ಟುಡಿಯೋಗಳೇ ಅಪರೂಪ ಅಂಥದುರಲ್ಲಿ ತಮ್ಮ ಬಡತನದ ಬೇಗೆಯಲ್ಲಿಯೂ ಪೋಟೋ ತೆಗೆಯುವ ಹವ್ಯಾಸೀ ಛಾಯಾಗ್ರಾಹಕರಾಗಿದ್ದ ಚನ್ನಬಸಪ್ಪನವರ ತಲೆಯಲ್ಲಿ ಹೊಳೆದಿದ್ದು ಸ್ಟುಡಿಯೋ ಪರಿಕಲ್ಪನೆ, ಹಂತಹಂತವಾಗಿ ತಮ್ಮ ಗುಣಮಟ್ಟದ ಪೋಟೋ ಕಲೆಯ ಮೂಲಕ ಇಡೀ ಮುನವಳ್ಳಿ ಹಾಗೂ ಸುತ್ತ ಮುತ್ತಲಿನ ಜನತೆಗೆ ಪರಿಚಿತರಾಗಿ ಎಲ್ಲರೂ ತಮ್ಮ ಮನೆಯ ಮಂಗಲಕಾರ್ಯವಿರಲಿ.ಇನ್ನಿತರ ಕಾರ್ಯಕ್ರಮವಿರಲಿ ಬಸವರಾಜ ಪೋಟೋ ಸ್ಟುಡಿಯೋದ ಚನ್ನಬಸಪ್ಪನವರನ್ನು ಕರೆಯಿರಿ ಎಂದು ಹೇಳುವ ಮಟ್ಟಿಗೆ ಇವರ ಛಾಯಾಗ್ರಹಣ ಪ್ರಸಿದ್ದಿಯಾಯಿತು.ತಮ್ಮ ಮಗ ಬಸವರಾಜನಿಗೂ ಕೂಡ ಇದರ ಗೀಳನ್ನು ಅಂಟಿಸಿದರು.

---

24. ವೈ. ಬಿ. ಕಡಕೋಳ, 'ಪತ್ರಿಕಾ ರಂಗದ ಹಿರಿಯ ಚೇತನ ಮಲ್ಲೇಶಪ್ಪ ಬಡೆಮ್ಮಿ', ಕನ್ನಡಮ್ಮ ದಿನಪತ್ರಿಕೆ, 17-7-2011, ಪುಟ – 4

ಬಸವರಾಜ, ಸಂಜು, ಪ್ರಶಾಂತ ಮೂವರು ಮಕ್ಕಳೂ ತಂದೆಯ ಹಾಗೆಯೇ ಪೋಟೋಗ್ರಫಿಯಲ್ಲಿ ಪಳಗತೊಡಗಿದರು.ತಂದೆಯ ಹಾದಿಯಲ್ಲಿ ನಡೆಯುತ್ತಿರುವಾಗಲೇ ವಿಧಿ ಅವರನ್ನು ತನ್ನತ್ತ ಸೆಳೆಯಿತು. ಮಕ್ಕಳಿನ್ನೂ ಚಿಕ್ಕವರು ತಂದೆಯ ಅಕಾಲಿಕ ಸಾವು ಅವರ ಮೇಲೆ ಗಾಢವಾದ ಪರಿಣಾಮವನ್ನುಂಟು ಮಾಡಿತು.ಆದರೆ ಅವರ ಪತ್ನಿ ಮಕ್ಕಳನ್ನು ತಂದೆಯಂತೆ ಅತೀವ ಕಾಳಜಿಯಿಂದ ಬೆಳೆಸಿದ ಪರಿಣಾಮ ಅವರ ಸಾವಿನ ದುಃಖದಲ್ಲಿಯೂ ಮತ್ತೆ ಫೀನಿಕ್ಸನಂತೆ ಚೇತರಿಸಿಕೊಂಡು ಮಕ್ಕಳು ತಮ್ಮ ವಿದ್ಯಾರ್ಥಿದೆಸೆಯಿಂದ ತಂದೆಯ ಕ್ಯಾಮರಾ ಕೈಗೆ ತಗೆದುಕೊಂಡು ತಾವು ಆ ವೃತ್ತಿಯನ್ನು ಮುಂದುವರೆಸಿಕೊಂಡು ಬಂದರು. ಈಗಿನ ಆಧುನಿಕ ತಂತ್ರಜ್ಞಾನದ ಎಲ್ಲ ಹಂತಗಳನ್ನು ಅಳವಡಿಸಿಕೊಂಡು ಪೋಟೋ.ವಿಡಿಯೋ.ಮಿಕ್ಸಿಂಗ್.ಬ್ಯಾನರ ತಯಾರಿಕೆ.ವಿಸಿಟಿಂಗ್ ಕಾರ್ಡ ಏನೆಲ್ಲ ಛಾಯಾಗ್ರಹಣಕ್ಕೆ ಸಂಬಂಧಿಸಿದ ಪರಿಕರಗಳನ್ನು ಹೊಂದುವ ಜೊತೆಗೆ ತಮ್ಮದೇ ಆದ ಸ್ಟುಡಿಯೋವನ್ನು ಆಧುನಿಕ ಶೈಲಿಯಲ್ಲಿ ನಿರ್ಮಿಸಿಕೊಂಡಿದ್ದು ದಾಖಲಾರ್ಹ ಸಂಗತಿ. ತಂದೆಗೆ ತಕ್ಕ ಮಕ್ಕಳಾಗಿ ಈಗ ಬಸವರಾಜ ಮತ್ತು ಪ್ರಶಾಂತ, ಪೋಟೋ ಸ್ಟುಡಿಯೋ ಮುನ್ನಡೆಸುತ್ತಿದ್ದರೆ ಸಂಜೀವ ಸಮಾಜಸೇವೆಯಲ್ಲಿ ತೊಡಗಿಕೊಂಡು ತನ್ನದೇ ಹೆಸರನ್ನು ಉಳಿಸಿರುವರು.

ಮುನವಳ್ಳಿ ಎಲ್ಲ ಹಂತಗಳಲ್ಲಿಯೂ ಬೆಳೆಯುತ್ತಿರುವ ಪ್ರದೇಶ,ಇಂಥ ಪ್ರದೇಶದಲ್ಲಿ ತಾಲೂಕಿನಲ್ಲಿಯೇ ಬಸವರಾಜ ಸ್ಟುಡಿಯೋ ಎಂದರೆ ಮುನವಳ್ಳಿಯ ಬಸವರಾಜ ಮತ್ತು ಪ್ರಶಾಂತ ಎಂದು ಹೇಳುವ ಮಟ್ಟಿಗೆ ಇವರ ಪೋಟೋಗ್ರಫಿ ಇಂದು ಹೆಸರುವಾಸಿಯಾಗಿದೆ. ಎಲ್ಲೆಡೆಯಲ್ಲಿಯೂ ಹೆಸರು ಖ್ಯಾತಿ ತರುವ ಜೊತೆಗೆ ಕಿರಿಯವನಾದ ಪ್ರಶಾಂತ ಪತ್ರಿಕಾ ವರದಿಗಾರನಾಗಿಯೂ ಕೂಡ ಬೆಳೆದಿದ್ದು ಬಿಡುವಿಲ್ಲದ ಚಟುವಟಿಕೆಗಳಲ್ಲಿ ತೊಡಗಿದ್ದು ಬಸವರಾಜ ಸವದತ್ತಿ ತಾಲೂಕಿನ ಛಾಯಾಗ್ರಾಹಕರ ಸಂಘಟನೆಯಲ್ಲಿ ತೊಡಗಿದ್ದು ತನ್ನ ಪ್ರತಿಭೆಯ ಮೂಲಕ ಹೆಸರುವಾಸಿಯಾಗಿರುವನು ಸಂಜೀವನು ಕೂಡ ಜೈಂಟ್ಸ ಇಂಟರ್ ನ್ಯಾಷನಲ್ ಸಂಸ್ಥೆಯಲ್ಲಿ ಅನೇಕ ಸಾಮಾಜಿಕ ಚಟುವಟಿಕೆಗಳಲ್ಲಿ ಭಾಗವಹಿಸಿರುವನು. ಹೀಗೆ ತಂದೆ ಹಾಕಿಕೊಟ್ಟ ಮಾರ್ಗದಲ್ಲಿ ನಡೆಯುವ ಜೊತೆಗೆ ಕಳೆದ ನಲವತ್ತಕ್ಕೂ ಹೆಚ್ಚು ವರ್ಷಗಳಿಂದ ಮಕ್ಕಳು ತಂದೆಯಂತೆಯೇ ಪೋಟೋ ಸ್ಟುಡಿಯೋ ಮುನ್ನಡೆಸಿಕೊಂಡು ಬರುತ್ತಿರುವುದು ಅಪರೂಪದ ಸಂಗತಿ.ಸದ್ಯ ಮುನವಳ್ಳಿಯಲ್ಲಿ ಅನೇಕ ಪೋಟೋ ಸ್ಟುಡಿಯೋಗಳು ತಲೆ ಎತ್ತಿವೆ.ಆದರೂ ಜನರ ಬಾಯಲ್ಲಿ ಹೆಚ್ಚು ಬಳಕೆಯಲ್ಲಿರುವ ಪೋಟೋ ಸ್ಟುಡಿಯೋ ಮತ್ತು ಭವಾನಿ

ಆಪ್‌ಸೆಟ್ ಎಂದರೆ ಬಸವರಾಜ ಪೋಟೋ ಸ್ಟುಡಿಯೋ ಇವರ ಸಂಗ್ರಹದಲ್ಲಿ ಇಂದಿಗೂ ಕಪ್ಪು ಬಿಳುಪು ಛಾಯಾಗ್ರಹಣದ ಚಿತ್ರಗಳಿಂದ ಹಿಡಿದು ಇಂದಿನವರೆಗೂ ಚಿತ್ರಿಸಿದ ಚಿತ್ರಗಳು ಉಳಿಸಿಕೊಂಡು ಬಂದಿದ್ದು ಸ್ಮರಣೀಯ.[25]

---

25. ಸಂದರ್ಶನ, ಬಸವರಾಜ ತುಳಜನ್ನವರ, 8–3–2013 ವಯಸ್ಸು 37

**4.11 ರಂಗ ಪರಂಪರೆ, ಬಯಲಾಟಗಳು, ದೊಡ್ಡಾಟಗಳು, ನಾಟಕಗಳು**

ಕರ್ನಾಟಕ ಜನಪದ ರಂಗಕಲೆಯು ಹಲವು ಪ್ರಕಾರಗಳಲ್ಲಿ ದೊಡ್ಡಾಟ, ಸಣ್ಣಾಟ, ನಾಟಕ ಇತ್ಯಾದಿಗಳನ್ನು ಒಳಗೊಂಡಿದ್ದು. ಪ್ರತಿಯೊಂದು ಜೀವಿಗೆ ಸುಖದ ಅಪೇಕ್ಷೆಯು ಸಹಜವಾಗಿದೆ.ತನಗೆ ಕಿಂಚಿತ್ತೂ ಕಷ್ಟವಾಗಬಾರದು. ಸದಾ ಆಸೆಗಳು ನೇರವಾಗಿ ಫಲಪ್ರದವಾಗಬೇಕೆಂಬ ಅಭಿಲಾಷೆಯಿಂದ ಶರೀರ ಮಾಧ್ಯಮದಿಂದ ಕಾಯಕನಿರತರಾದ ಜೀವಿಗಳು ಸಂದಾಯವಾದ ಫಲದಲ್ಲಿ ಆನಂದವನ್ನು ಸವಿಯಲು ನಾಟಕ, ಬಯಲಾಟ, ಸಣ್ಣಾಟ, ದೊಡ್ಡಾಟದಂಥ ಚಟುವಟಿಕೆಗಳಲ್ಲಿ ನಿರತರಾದರು.

ಬಯಲಾಟಗಳಲ್ಲಿ ದೊಡ್ಡಾಟ. ಸಣ್ಣಾಟಗಳು ಪ್ರಸಿದ್ದವಾದವು ಅದರಲ್ಲೂ ಸಣ್ಣಾಟಗಳು ಎಲ್ಲ ದೃಷ್ಟಿಯಿಂದ ವೈಶಿಷ್ಟ್ಯತೆಯನ್ನು ಮೆರೆದು ಜನಪ್ರಿಯವಾಗಿವೆ. ಸಣ್ಣಾಟಗಳ ಮುಖ್ಯ ವಾದ್ಯ ಡಪ್ಪು. ದುಂಡಾದ ಕಬ್ಬಿನ ಇಲ್ಲವೆ ಮರದ ಸುತ್ತಿಗೆ ಚರ್ಮ ಬಿಗಿದು ಕಟ್ಟಿದ ಇದು ಖನಿ ವಾದನದಂತೆಯೇ ಇರುತ್ತದೆ. ಡಪ್ಪಿನ ಚುರುಕು ಬಡಿತ ಸಣ್ಣಾಟದ ಹಾಡುಗಳಿಗೆ ಅನ್ಯೋನ್ಯವಾಗಿ ಬೆರೆತು ಸಾಗುವ ಸಣ್ಣಾಟಗಳಲ್ಲಿ ಸಾಮಾನ್ಯ ವೇಷಭೂಷಣಗಳಲ್ಲಿ ಬಣ್ಣ ಬಳಿದು ಸರಳ ಶೈಲಿಯಲ್ಲಿ ಪ್ರದರ್ಶನಗೊಳ್ಳುವ ಮೂಲಕ ಜನರನ್ನು ತಮ್ಮತ್ತ ಸೆಳೆಯುತ್ತವೆ.ದೊಟ್ಟಾಟಗಳು ಅವಧಿಯ ದೃಷ್ಟಿಯಿಂದಲೂ ಜೊತೆಗೆ ಕಥಾವಿಸ್ತರಣೆಯಿಂದಲೂ.ವಿಶಾಲವಾದ ಬಯಲಿನಲ್ಲಿ ಆಡುವ ಆಟಗಳು.

ಈ ದೊಡ್ಡಾಟವನ್ನು ಮುನವಳ್ಳಿಯಲ್ಲಿ ಆಡುತ್ತಿದ್ದ ಕಲಾವಿದರೆಂದರೆ ಟಾಕಪ್ಪ.ನಿಂಗಪ್ಪ ಸಣಕಲ್.(ಮಾಸ್ತರ್) ಪಾಂಡು ಹಲಗಿ ಯಶವಂತ ಕಘರ್ಡೆ ಹಿಮ್ಮೇಳದವರು. ಶ್ರೀಶೈಲಸ್ವಾಮಿ ಸಂಭಾಳಮಠ(ಮುಮ್ಮೇಳದವರು) ಹೀಗೆ ಅನೇಕ ಕಲಾವಿದರು ಸೇರಿ "ಲಂಕಾದಹನ" ದೊಡ್ಡಾಟವನ್ನು ಆಡುತ್ತಿದ್ದರು.ಇವರಲ್ಲಿ ವಿರುಪಾಕ್ಷ ಸಿರಸಂಗಿ ಮದ್ದಳೆ ವಾದಕರಾದರೆ ನಿಂಗಪ್ಪ ಹೊಸಮನಿ ಪೇಟಿ ಬಾರಿಸುತ್ತಿದ್ದರು. ಇನ್ನು ಹಣಮಂತನ ಪಾತ್ರವನ್ನು ಪಂಚಪ್ಪ ಮೇದಾರ, ರಾಮನಾಗಿ ವಿರುಪಾಕ್ಷ ಬಾಜಪ್ಪಗೋಳ, ಲಕ್ಷ್ಮಣನಾಗಿ ರಾಮು ಮುರಗೋಡ, ಸೀತಾಳಾಗಿ ಚನ್ನಪ್ಪ ಸೂಲಕಟ್ಟಿ, ಮಂಡೋದರಿಯಾಗಿ ಪುಂಡಲೀಕ ಮೋಹರೆ.ರಾವಣ ನಾಗಿ ಮುದಕಪ್ಪ ಹುರುಳಿ ಇಂದ್ರಜಿತ್ ನಾಗಿ ಶಿವಾಜಿ ಹುರುಳಿ ಮಾರೀಚನಾಗಿ ಗೋರಿಸಾಬ ತಮ್ಮ ತಮ್ಮ ಪಾತ್ರಗಳನ್ನು ಅಚ್ಚುಕಟ್ಟಾಗಿ ನೆರವೇರಿಸುತ್ತಿದ್ದರಂತೆ. ಇಂಥ ಬಯಲಾಟಗಳನ್ನು ಯಲಿಗಾರ ಇವರ ಜಾಗೆಯಲ್ಲಿ ಅಥವ ಕೋಟೆಯ ಆವರಣದ ಜಾಗೆಯಲ್ಲಿ ಆಡುತ್ತಿದ್ದರಂತೆ. ಮುನವಳ್ಳಿಯಲ್ಲಿ ಹೆಚ್ಚು ಪ್ರದರ್ಶನಗೊಂಡ ದೊಡ್ಡಾಟಗಳೆಂದರೆ ಕೃಷ್ಣಾರ್ಜುನರ ಕಾಳಗ.ರತಿ ಕಲ್ಯಾಣ, ಅಹಿರಾವಣ–ಮಹಿರಾವಣ, ಲಂಕಾದಹನ ಇತ್ಯಾದಿಗಳು.

ಇನ್ನು ನಾಟಕ ಆಡುತ್ತಿದ್ದ ಕಲಾವಿದರೆಂದರೆ ಹಾಸ್ಯ ಪಾತ್ರಕ್ಕೆ ಹೇಳಿ ಮಾಡಿಸಿದಂತಿದ್ದ ಹಾಸ್ಯ ಕಲಾವಿದ ರಾಚಯ್ಯ.ಅಪ್ಪಯ್ಯ.ಸಂಭಾಳಮಠ.ಭಗವಂತಪ್ಪ ಸಣಕಲ್(ಪಿಯಾನೋ ಮಾಸ್ತರ)ದೇವೇಂದ್ರಪ್ಪ ದಿನ್ನಿಮನಿ(ಸ್ತ್ರೀ ಪಾತ್ರದಾರಿ)ಏಕನಾಥ ಕರಿದಿನ.ರಾಮಣ್ಣ ದಿನ್ನಿಮನಿ,ರಾಮು ಕರದಿನ ಟಾಕಪ್ಪ ಸಣಕಲ್.ಮುದಕಪ್ಪ ಹೊನ್ನಳ್ಳಿ ಚಂಬಣ್ಣ ಹೂಲಿಯವರ ನಾಟಕ ತಂಡ ಒಂದೆಡೆಯಾದರೆ ಪಂಚಲಿಂಗೇಶ್ವರ ನಾಟ್ಯ ಸಂಘ ಎಂಬ ಹೆಸರಿನಲ್ಲಿ ಪಾಂಡಪ್ಪ ಮಿರಜಕರ ಮ್ಯಾನೇಜರ್ ಆಗಿದ್ದು

ಕೃಷ್ಣ ಜೋಷಿ ಸಂಗೀತ ಸಂಯೋಜನೆಯಲ್ಲಿ ಹಲವು ನಾಟಕಗಳನ್ನು ಆಡಿದರು.ಅದರಲ್ಲಿ ಪ್ರಸಿದ್ದವಾಗಿದ್ದು "ಸೌಭಾಗ್ಯ ಲಕ್ಷ್ಮೀ ನಾಟಕ ಇದರಲ್ಲಿ ದೇವೆಂದ್ರಪ್ಪ ಯಲಿಗಾರ ಖಳನಾಯಕ ಪಾತ್ರದಲ್ಲಿದ್ದು ಬಸಪ್ಪ ಗೊಂಗಡಿ ಸ್ತ್ರೀ ಪಾತ್ರ ನಿರ್ವಹಿಸಿದ್ದು ಗಂಗಪ್ಪ ಗೋದಿ, ಶಿವಣ್ಣ ಶಿರೆನ್ನವರ, ಪಂಚಪ್ಪ ಯಲಿಗಾರ, ಯಲ್ಲಪ್ಪ ಕಟ್ಟೇಕಾರ(ಹಾಸ್ಯ ಪಾತ್ರ), ಕರಿಬಸವಶಾಸ್ತ್ರಿಗಳು. ಜಕಾತಿ ಮಾಸ್ತರ. ಕುಂಬಾರ ಬಸಪ್ಪ, ಫಕೀರಪ್ಪ ಜೂಲ ಶಾಂತಯ್ಯ ಕೊಡ್ಲಿವಾಡಮಠ. ಮಾಟನವರ ಶಿಕ್ಷಕರು.ಕಥೆಗಾರರಾಗಿ ಬೇವಿನಗಿಡದ ಶಿಕ್ಷಕರು ಪಂಚನಗೌಡ್ರ ಹಿರಲಿಂಗನವರ ಮೊದಲಾದವರು ಭೂಪಾಲಪ್ಪ ಯಲಿಗಾರ.ಬಾಬೂರಾವ್ ಯಲಿಗಾರ. ನಿರ್ದೇಶಕರಾಗಿದ್ದ ಶಂಕರ ಐರಸಂಗ.ಅಂದರೆ, ಮುನವಳ್ಳಿಯಲ್ಲಿ ಅಂದು ಎರಡು ಗುಂಪುಗಳವರು ನಾಟಕ ಮಾಡುವುದರಲ್ಲಿ ಎತ್ತಿದ ಕೈ.ಇನ್ನು ಜೀವಶಾಸ್ತ್ರ ವಿಷಯದಲ್ಲಿ ಉತ್ತಮ ಬೋಧಕರಾಗಿದ್ದ ಕಳಸನಗೌಡರ ಶಿಕ್ಷಕರೂ ಕೂಡ ಕಲಾವಿದರು.ಇವರ ನೇತೃತ್ವದಲ್ಲಿ "ವೀರ ಧನಂಜಯ"ನಾಟಕವೂ ಅಂದು ಹೆಚ್ಚು ಪ್ರಸಿದ್ದವಾಗಿತ್ತು.ಪಂಚಲಿಂಗೇಶ್ವರ ನಾಟಕ ಸಂಘದವರು ಮಾಡಿದ ಇತರ ನಾಟಕಗಳೆಂದರೆ ಸ್ತ್ರೀರತ್ನ, ನಿರ್ಮಲಾ, ಮಾನವತಿ, ಹಡೆದವ್ವ, ಚಿತ್ರಾಂಗದಾ ಪ್ರಮುಖವಾದವುಗಳು.

ಈಗ ನಿವೃತ್ತರಾಗಿರುವ ಡಿವೈಎಸ್‌ಪಿ ಪಾಂಡುರಂಗ ಯಲಿಗಾರ ಇವರು ಅಭಿನಯಿಸಿದ್ದ ನಾಟಕ"ಮನೆಯೇ ಮಂಗಳ ಗೌರಿ"(1969) ಇದರಲ್ಲಿ ಮಾಟನವರ ಮತ್ತು ಜಕಾತಿ ಶಿಕ್ಷಕರು ಚಂದ್ರು ಉಜ್ಜಿನಕೊಪ್ಪ.ಟಿ.ಎಸ್.ಬಡೆಮ್ಮಿ ಸ್ವತಃ ಪಿ.ಬಿ.ಯಲಿಗಾರ ಇವರ ಸಹೋಹದರ ಸುರೇಶ.ಯಲಿಗಾರ ಅಭಿನಯಿಸಿದ್ದು ಈ ನಾಟಕವು 1970 ರಲ್ಲಿ ಜರುಗಿದ ಮೈಸೂರ ದಸರಾ ಉತ್ಸವಕ್ಕೂ ಆಯ್ಕೆಯಾಗುವ ಮೂಲಕ ಮುನವಳ್ಳಿಯ ರಂಗ ಕಲಾವಿದರ ಅಭಿನಯದ ನಾಟಕವೊಂದು ದಸರಾ ಹಬ್ಬದಲ್ಲಿ ಜರುಗುವ ಮೂಲಕ ನಾಡಿನಲ್ಲಿ ಖ್ಯಾತಿ ಗಳಿಸಿದ್ದು ಈಗ ಇತಿಹಾಸವೆಂದರೆ ಅಚ್ಚರಿಯೇನಲ್ಲ.ಈಗಲೂ ಸಹ ಅಂಥಹ ಕಲಾವಿದರಿದ್ದು ಪ್ರತಿವರ್ಷ ನಾಟಕಗಳು ಜರುಗುತ್ತಿವೆ.

ಇದೇ ವರ್ಷ (20-1-2013) ಬೆಳಗಾವಿ ಜಿಲ್ಲಾ ನಾಟಕೋತ್ಸವದ ಅಂಗವಾಗಿ ರಂಗಾಯಣ ಇವರ ಆಶ್ರಯದಲ್ಲಿ ಶ್ರೀ ವೀರಭದ್ರೇಶ್ವರ ನಾಟ್ಯ ಸಂಘ ಮಾವಿನಕಟ್ಟಿ ಓಣಿ ಮುನವಳ್ಳಿ ಇವರ ತಂಡವು ಅಭಿನಯಿಸಿದ "ರೈತನ ಬಾಳು ಕಣ್ಣೀರಿನ ಗೋಳು" ಎಂಬ ನಾಟಕವು ಖಾನಾಪೂರ ತಾಲೂಕಿನ ಗಂದಿಗವಾಡದಲ್ಲಿ ಜರುಗಿದ ನಾಟಕೋತ್ಸವದಲ್ಲಿ ಪ್ರದರ್ಶನಗೊಂಡಿತು.ಈ ನಾಟಕದ ಪ್ರಮುಖ ಕಲಾವಿದರೆಂದರೆ ಮಹಾಂತೇಶ ಪಶುಪತಿಮಠ, ಪಂಚಪ್ಪ, ಗುಂಡ್ಲೂರ, ವಿಠ್ಠಲ ನಲಗೆ, ಮಲ್ಲಿಕಾರ್ಜುನ ಪಾಟೀಲ, ಸೋಮಶೇಖರ ನಲವಡೆ, ಯಲ್ಲಪ್ಪ ಗಂಗನ್ನವರ, ಹಾರ್ಮೋನಿಯಂ ಮಾಸ್ತರ ರಾಮಣ್ಣ ಚಂದರಗಿ, ಸಂಗೀತ ಸಂಯೋಜನೆ ಕುತ್ಬುದ್ದೀನ ಸಿಂದಿಕುರುಬೇಟ ಇವರಲ್ಲದೇ ಇನ್ನೂ ಹಲವು ಕಲಾವಿದರು ಈ ಸಂಘಟನೆಯ ಮೂಲಕ ಮುನವಳ್ಳಿ ರಂಗಪರಂಪರೆಯ ಖ್ಯಾತಿಯನ್ನು ರಂಗಾಯಣದ ಆಶ್ರಯದಲ್ಲಿ ನಾಟಕ ಪ್ರದರ್ಶನ ನೀಡುವ ಮೂಲಕ ಮುನವಳ್ಳಿಯ ರಂಗಪರಂಪರೆಗೆ ಸಾಕ್ಷಿಯಾದರು, ಶಿಕ್ಷಕರಾದ ವೈ.ಎಫ್.ಶಾನುಭೋಗ. ಕಲಾವಿದ ಸೀತಾರಾಮ ಕೋಪರ್ಡೆಯವರು

ಕೂಡ ಹವ್ಯಾಸೀ ಕಲಾವಿದರಾಗಿದ್ದು ಸೀತಾರಾಮ ಕೋಪರ್ಡೆ ಇಳಿವಯಸ್ಸಿನಲ್ಲಿದ್ದು ಒಂದು ಕಾಲಕ್ಕೆ ಇವರೂ ಕೂಡ ದೊಡ್ಡ ಮಿಮಿಕ್ರಿ.ಚಲನಚಿತ್ರ ಗೀತೆಗಳ ಗಾಯನದಲ್ಲಿ ಸುಪ್ರಸಿದ್ದರಾಗಿದ್ದರು.

ಮುನವಳ್ಳಿಗೆ ಅಂದು ಹೆಚ್ಚು ದಿನಗಳವರೆಗೆ ನಡೆದ ನಾಟಕ ಕಂಪನಿಗಳೆಂದರೆ ಚಿತ್ತರಗಿ.ದುತ್ತರಗಿ,ಕಮತಗಿ,ಗುಡಗೇರಿ.ಏಣಗಿ ಬಾಳಪ್ಪ.ಚಿಂದೋಡಿ ಬಂಗಾರೇಶರ ನಾಟಕ ಕಂಪನಿಗಳು ಕೂಡ ಹೆಚ್ಚು ದಿನ ತಮ್ಮ ನಾಟಕ ಟೆಂಟ್ ಹಾಕುತ್ತಿದ್ದವು.ಅಷ್ಟೇ ಅಲ್ಲ ಕಂಪನಿ ನಾಟಕಗಳನ್ನು ನೋಡುವ ಮೂಲಕ ಅಲ್ಲಿನ ಕಲಾವಿದರಿಗೂ ಪ್ರೋತ್ಸಾಹವನ್ನು ಮುನವಳ್ಳಿಯ ಜನತೆ ನೀಡುತ್ತ ಬಂದಿರುವರು.ಆ ಪರಂಪರೆ ಇಂದಿಗೂ ಬೆಳೆದು ಬಂದಿದೆ.ಮುನವಳ್ಳಿಯಲ್ಲಿ ಜರುಗುವ ಜಾತ್ರೆ ಹಬ್ಬ ಹರಿದಿನಗಳ ಸಂದರ್ಭದಲ್ಲಿ ಇಂದಿಗೂ ಕೂಡ ಅನೇಕ ಸಂಘಟನೆಗಳು ತಮ್ಮದೇ ಆದ ಸಂಘವನ್ನು ಸ್ಥಾಪಿಸಿ ನಾಟಕ ಮಾಡುವ ಮೂಲಕ ರಂಗಪರಂಪರೆಯನ್ನು ಉಳಿಸಿಕೊಂಡು ಬಂದಿರುವರು.[26]

**ಸಂಗ್ಯಾಬಾಳ್ಯಾ**

ಬೆಳಗಾವಿ ಜಿಲ್ಲೆಯ ಪ್ರತಿಯೊಂದು ಹಳ್ಳಿಯಲ್ಲೂ ಪ್ರಚಲಿತವಿರುವ ಸಣ್ಣಾಟವೆಂದರೆ "ಸಂಗ್ಯಾ-ಬಾಳ್ಯಾ".ಇದು ಸತ್ಯ ಘಟನೆಯನ್ನು ಒಳಗೊಂಡ ಬೈಲವಾಡ ಪತ್ತಾರ ಮಾಸ್ತರು ರಚಿಸಿದ ಕೃತಿ, ಸಮಾಜದಲ್ಲಿ ನಡೆಯುವ ವಿಕೃತ ಕಾಮ, ದ್ವೇಷ, ಅಸೂಯೆ, ಕೊಲೆ, ದಬ್ಬಾಳಿಕೆ ಮುಂತಾದ ಪ್ರಸಂಗಗಳನ್ನು ಒಳಗೊಂಡ ಇದು ಹೀಗೆ ಯಾರೂ ಮಾಡಬಾರದೆಂಬ ನೀತಿಯನ್ನು ಹೇಳುತ್ತದೆ.ಇದನ್ನು ಅಭಿನಯಿಸುವ ಕಲಾವಿದರು ರೋಷಾವೇಷದಿಂದ ಮೈಮರೆತು ಅಭಿನಯ ಸಂದರ್ಭದಲ್ಲಿ ಕೊಲೆಗಳು ನಡೆದ ಘಟನೆಗಳೂ ಜರುಗಿವೆ ಎಂದು ಹೇಳುತ್ತಾರೆ ಹೀಗಾಗಿ ಈ ಆಟವನ್ನು ಆಡುವುದಕ್ಕೆ ನಿರ್ಬಂಧ ಹೇರಿದ ಸಂಗತಿ ಕೂಡ ಹಿರಿಯರು ಹೇಳುವರು.ಇಂಥ ಆಟವನ್ನು ಮುನವಳ್ಳಿಯ ಕಲಾವಿದರು ಕೂಡ ಭಾವಪರವಶರಾಗಿ ಆಡುತ್ತಿದ್ದರು.

ರುದ್ರಪ್ಪ ಗುಂಡ್ಲೂರ ಸಂಗ್ಯಾನ ಪಾತ್ರ ನಿರ್ವಹಿಸಿದರೆ ಫಕೀರಪ್ಪ ಹೂಲಿ ಬಾಳ್ಯಾನ ಪಾತ್ರ ನಿರ್ವಹಿಸುತ್ತಿದ್ದರು.ಅಪ್ಪಯ್ಯಸ್ವಾಮಿ ಸಂಬಾಳಮಠ ಈರ್ಯಾನ ಪಾತ್ರ ಮಾಡಿದರೆ ಗಟನೂರಿನ ಚುಮನಾಳನ್ನು ಗಂಗಾಳ ಪಾತ್ರ ಮಾಡಲು ಕರೆತರುತ್ತಿದ್ದರಂತೆ.ಧಾರವಾಡದಿಂದ ಪರಮ್ಮನ ಪಾತ್ರ ಮಾಡಲು ಓರ್ವ ಕಲಾವಿದ ಬಂದರೆ ವಿರುಪಾಕ್ಷಿ ಪಾತ್ರವನ್ನು ಮಲ್ಲಿಕಾರ್ಜುನ ಗಂಗಣ್ಣವರ.ರಾಜು ಯಾದವ ಬಾಗಲ್ಯಾ ಆಗಿ ಶಿವಪ್ಪ ಮಾವಿನಕಟ್ಟಿಯವರು ಮುದುಕನ ಪಾತ್ರ ಮಾಡುತ್ತಿದ್ದರಂತೆ ಇನ್ನು ಹಲವು ಕಲಾವಿದರು ಮುನವಳ್ಳಿಯಲ್ಲಿ ಸಂಗ್ಯಾ-ಬಾಳ್ಯಾ ಸಣ್ಣಾಟ ಆಡುವ ಮೂಲಕ ಸಂಗ್ಯಾ-ಬಾಳ್ಯಾನ ಸ್ನೇಹ. ಈರ್ಯಾನ ಹೆಂಡತಿ ಗಂಗಾಳೊಡನೆ ಅನೈತಿಕ ಸಂಬಂಧ ಬೆಳೆಸುವ ಸಂಗ್ಯಾ, ಇವರಿಬ್ರ ಚಟುವಟಿಕೆಗೆ ಸಹಕರಿಸುವ ಪರಮ್ಮ ಹೀಗೆ ದುರಂತ ಅಂತ್ಯದಲ್ಲಿ ಸಾಗುವ ಸಂಗ್ಯಾ-ಬಾಳ್ಯಾ  ಸಂಗ್ಯಾ ಸಾಯುವ ವೇಳೆಯಲ್ಲಿ ಪ್ರಾಣಬಿಕ್ಷೆ ಬೇಡುವ ದೃಶ್ಯ ಪ್ರೇಕ್ಷಕರ ಮನಸ್ಸಿನಲ್ಲಿ ಅಚ್ಚಳಿಯದಂತೆ ನಿಲ್ಲುತ್ತಿದ್ದವು ಎನ್ನುವುದನ್ನು ಶ್ರೀಶೈಲಸ್ವಾಮಿ ಸಂಭಾಳಮಠರು ಅಂದಿನ ಜನರಿಗೆ

---

26. ಈಶ್ವರಚಂದ್ರ ಎಸ್. ಬೆಟಗೇರಿ, ಬೆಳಗಾವಿ ಜಿಲ್ಲೆಯ ಸಣ್ಣಾಟಗಳು , ಬಯಲಾಟಗಳು ಪುಟ – 560

ಇಂಥ ತಪ್ಪನ್ನು ಯಾರೂ ಮಾಡಬಾರದೆನ್ನುವ ಸಂದೇಶವನ್ನು ಸಂಗ್ಯಾ-ಬಾಳ್ಯಾ ಆಟವು ಅಚ್ಚಳಿಯದಂತೆ ಮೂಡಿಸುವ ಮೂಲಕ ಜನಪ್ರೀಯ ಸಣ್ಣಾಟವಾಗಿತ್ತು ಎನ್ನುವರು. ಒಟ್ಟಾರೆ ಮುನವಳ್ಳಿ ಗ್ರಾಮದಲ್ಲಿ ದೊಡ್ಡಾಟ, ಸಣ್ಣಾಟ, ರಂಗಭೂಮಿ ಕಲಾವಿದರೂ ತಮ್ಮ ಕಲೆಯನ್ನು ಪ್ರಸಿದ್ದಪಡಿಸಿದ್ದರೆನ್ನುವುದನ್ನು ಇಲ್ಲಿ ಜರುಗಿದ ರಂಗಪ್ರಯೋಗಗಳು ಅಂದಿನ ಕಲಾವಿದರು ಅವುಗಳ ದೃಶ್ಯಗಳನ್ನು ನೆನಪಿಸಿಕೊಳ್ಳುವುದನ್ನು ಕಂಡರೆ ನಿಜಕ್ಕೂ ಉತ್ತಮ ಕಲಾಪ್ರೇಮಿಗಳು ಮುನವಳ್ಳಿಯಲ್ಲಿ ಆಗಿ ಹೋಗಿದ್ದು ಅನೇಕರು ನಿಧನರಾಗಿದ್ದು ಕಲವೇ ಜನ ಈಗ ಬದುಕುಳಿದಿದ್ದು ಅವರಿಂದ ಇಂದಿಗೂ ಕೂಡ ತಮ್ಮ ಪಾತ್ರದ ಸಂಭಾಷಣೆ.ಘಟನೆ.ಅಂದು ನೆರೆಯುತ್ತಿದ್ದ ಜನ ಅವರ ಪ್ರೊತ್ಸಾಹ ಇತ್ಯಾದಿ ಹೇಳುವುದನ್ನು ಕಂಡಾಗ ಎಂಥಹ ಅದ್ಬುತ ಕಲಾವಿದರಿದ್ದರು ಎಂದೆನಿಸುವುದು.[27]

**4.12 ಚಲನಚಿತ್ರ ಮಂದಿರ**

ದೈನಂದಿನ ಬದುಕಿನಲ್ಲಿ ಸಂಗೀತ ನಾಟಕ ಕಲೆ ಇತ್ಯಾದಿ ಮನರಂಜನೆ ಒದಗಿಸುವ ಕ್ಷೇತ್ರಗಳು. ಸಿನೇಮಾ ಪ್ರಪಂಚದ ಗೀಳು ಇಂದು ದೂರದರ್ಶನ ಮನೆಮನೆಗಳಲ್ಲಿ ತಲುಪುವ ಮೂಲಕ ಮನರಂಜನೆಯ ಮಾಧ್ಯಮವಾಗಿ ಜನರತ್ತ ಆಕರ್ಷಣೆಯ ತಾಣವಾಗಿದೆ. ಇಂದು ಮಲ್ಟಿಪ್ಲೆಕ್ಸ ಚಿತ್ರಮಂದಿರಗಳವರೆಗೂ ಚಿತ್ರಮಂದಿರಗಳ ಇತಿಹಾಸ ದೊಡ್ಡದಿದೆ. ಆ ದಿಸೆಯಲ್ಲಿ ಮುನವಳ್ಳಿ ಕೂಡ ಹೊರತಾಗಿಲ್ಲ. ಇಲ್ಲಿನ ದೇವೆಂದ್ರಪ್ಪ ಯಲಿಗಾರ ಎಂಬುವವರು ಬೇರೆ ಬೇರೆ ಊರುಗಳಿಗೆ ಸಿನೇಮಾ ನೋಡಲೆಂದು ಹೋಗುತ್ತಿದ್ದರು. ಜೊತೆಗೆ ತಮ್ಮ ಸ್ನೇಹಿತರನ್ನು ಕರೆದೊಯ್ಯುತ್ತಿದ್ದರು.ಇವರ ಮನದಲ್ಲಿ ಆಗ ನಮ್ಮೂರಿಗೂ ಈ ಸಿನೇಮಾ ತರಬಾರದೇಕೆ ಎಂಬ ಯೋಚನೆ ಬಂದಿದ್ದೇ ತಡ ಬದಾಮಿ ಜಾತ್ರೆಯಲ್ಲಿ ಸಿಗುತ್ತಿದ್ದ ಟೆಂಟ್ ಟೂರಿಂಗ್(ಸಂಚಾರಿ ಚಿತ್ರಮಂದಿರ)ದವರನ್ನು ಸಂಪರ್ಕಿಸಿ ಅವರಿಗೆ ಎರಡು, ಮೂರು ತಿಂಗಳ ಬಾಡಿಗೆಗೆ ಮುನವಳ್ಳಿಯ ಕೋಟೆ ಆವರಣದ ಜಾಗೆಯಲ್ಲಿ ಹಾಗೂ ಈಗಿರುವ ಚಿತ್ರಮಂದಿರದ ಜಾಗೆಯಲ್ಲಿ ಸಿನೇಮಾ ತಂದೇ ಬಿಟ್ಟರು.ಮುನವಳ್ಳಿಯ ಜನರಿಗೆ ಈ ಸಿನೇಮಾ ಹುಚ್ಚು ಹಚ್ಚುತ್ತಿದ್ದಂತೆ ಆಗ ವರ್ಷಕ್ಕೊಮ್ಮೆಯೋ ಎರಡು ಸಲವೋ ಈ ಟೂರಿಂಗ ಟಾಕೀಜ ಬರತೊಡಗಿದವು. ಹೀಗೆ ಆರಂಭವಾದ ಸಿನೇಮಾ ಮಂದಿರಗಳ ಹಾವಳಿ ನರಹರಿ ರಾಮಾ ನಾಯ್ಕರ ಇವರ ಪ್ರಯತ್ನದ ಫಲವಾಗಿ ಖಾಯಂ ಟೂರಿಂಗ ಟಾಕೀಜ ರಾಯಲ್ ಟೂರಿಂಗ್ ಟಾಕೀಜ ಹೆಸರಿನಲ್ಲಿ ನೆಲೆಕಾಣುವಂತಾಗಿದ್ದು ಇತಿಹಾಸ.

ನರಹರಿ ರಾಮಾ ನಾಯ್ಕರ ಇವರು ಅಂದು "ಸಂಚಾರಿ ಚಲನಚಿತ್ರ ಮಂದಿರಗಳ ರಾಜ" ಎಂದು ಬಿರುದಾಂಕಿತರಾಗಿದ್ದರು. ಇವರು ಮುನವಳ್ಳಿಯಲ್ಲಿ ಚಲನಚಿತ್ರಮಂದಿರ ಸ್ಥಾಪಿಸಿ ತಮ್ಮ ಅಳಿಯಂದಿರಿಗೆ ಅದರ ನಿರ್ವಹಣೆ ವಹಿಸಿದರು. 17-2-1969 ಬುಧವಾರ ಆರಂಭಗೊಂಡ ಈ ಚಿತ್ರಮಂದಿರದಲ್ಲಿ ಮೊದಲಿಗೆ ಪ್ರದರ್ಶನಗೊಂಡ ಚಲನಚಿತ್ರ ಡಾಃರಾಜಕುಮಾರ ಅಭಿನಯದ"ಚಂದ್ರಹಾಸ" ಆಗ ಕೇವಲ ಎರಡು ಆಟಗಳು ಜರುಗುತ್ತಿದ್ದವು. ಸಂಜೆ 6.30 ಕ್ಕೆ

---

27. ಸಂದರ್ಶನ, ಶ್ರೀಶೈಲಸ್ವಾಮಿ ಸಂಬಾಳಮಠ, ದಿನಾಂಕ 4-3-2013, ವಯಸ್ಸು- 75

ಮೊದಲ ಪ್ರದರ್ಶನವಾದರೆ ರಾತ್ರಿ 9 ಕ್ಕೆ ಎರಡನೇ ಪ್ರದರ್ಶನ ಹೀಗೆ ರಾಯಲ್ ಟೂರಿಂಗ್ ಟಾಕೀಜ ಮುನವಳ್ಳಿಯಲ್ಲಿ ನೆಲೆಕಂಡಿತು. ಇಂದು ಈ ಚಿತ್ರಮಂದಿರ ಅತ್ಯಾಧುನಿಕ ಸಕಲ ಸೌಲಭ್ಯದೊಂದಿಗೆ ಡಿ.ಟಿ.ಎಚ್ ತಂತ್ರಜ್ಞಾನ ಅಳವಡಿಕೆಯೊಂದಿಗೆ ಪ್ರದರ್ಶನಗೊಳ್ಳುತ್ತಿದ್ದು ಈಗ ಖಾಯಂ ಚಿತ್ರಮಂದಿರವಾಗಿ ಗಂಗಾಧರಯ್ಯ.ದೇವಯ್ಯ.ಪಾಲನಕರ ಇವರ ನಿರ್ವಹಣೆಯಲ್ಲಿ ತನ್ನ ವ್ಯಾಪ್ತಿಯನ್ನು ಇಂದಿಗೂ ಉಳಿಸಿಕೊಂಡು ಬಂದಿದೆ.ಇಷ್ಟೇ ಅಲ್ಲ ಸಂತೋಷ ಚಿತ್ರಮಂದಿರ ಎಂಬ ಹೆಸರಿನ ವಿಡಿಯೋ ಚಿತ್ರಮಂದಿರವೊಂದು ಕೆಲವರ್ಷ ಇಲ್ಲಿ ಬಾಳಿಯವರು ನಡೆಸಿಕೊಂಡು ಬಂದರು ನಂತರ ಇದು ಕೂಡ ಪ್ರೊಜೆಕ್ಟರ ಅಳವಡಿಸಿಕೊಂಡು ಕೆಲವರ್ಷ ಕಾರ್ಯಾರಂಭ ಮಾಡಿತು. ನಂತರ ತನ್ನ ಪ್ರದರ್ಶನವನ್ನು ನಿಲ್ಲಿಸಿತು.[28]

### 4.13 ಗರಡಿ ಮನೆಗಳು

ದೈಹಿಕ ವ್ಯಾಯಾಮ ಉತ್ತಮವಾದ ದೇಹ ಸದೃಡ ಮೈಕಟ್ಟನ್ನು ಹೊಂದಲು ಹಿಂದಿನವರು ಗರಡಿಮನೆಗಳನ್ನು ಸ್ಥಾಪಿಸಿದ್ದರು. ಇಲ್ಲಿ ಪೈಲವಾನರು ತಯಾರಾಗುತ್ತಿದ್ದರು.ದೊಡ್ಡದಾದ ಕಲ್ಲುಗಳನ್ನು ಎತ್ತುವುದು.ಸಾಮ ಹೊಡೆಯುವುದು.ಊಟಾಬಸಿ ತಗೆಯುವುದು ಹೀಗೆ ದೈಹಿಕ ಕಸರತ್ತನ್ನು ನಡೆಸುವ ಗರಡಿ ಮನೆಗಳು ಮುನವಳ್ಳಿಯಲ್ಲಿವೆ.ಅವುಗಳೆಂದರೆ ಮೇದಾರ ಓಣಿ.ಸೂಲಕಟ್ಟಿ ಅಗಸಿ.ಮುಚ್ಚಂಡಿಯವರ ಓಣಿ.ಕಂಬಾರ ಓಣಿಗಳಲ್ಲಿ ಇರುವ ಗರಡಿ ಮನೆಗಳು.

ಇಂಥ ಸ್ಥಳಗಳಲ್ಲಿ ವ್ಯಾಯಾಮ ಮಾಡಿ ಪೈಲವಾನರೆನಿಸಿಕೊಂಡು ಕುಸ್ತಿ,ಈಜು, ಇತ್ಯಾದಿ ಸ್ಪರ್ಧೆಗಳಲ್ಲಿ ಭಾಗವಹಿಸುತ್ತಿದ್ದ ಪೈಲವಾನರೆಂದರೆ ಶಂಕ್ರೆಪ್ಪ ಸೊಪ್ಪಡ್ಲ, ನಿಂಗೋಜಿ ಮೇದಾರ, ಫಕೀರಪ್ಪ ಮೇದಾರ, ಚನ್ನಪ್ಪ ಗುರ್ಲಹೊಸೂರ. ಯಲ್ಲಪ್ಪ ಕೇಮೇಜಿ, ಫಕೀರಪ್ಪ ಮುರಗೋಡ, ಯಲ್ಲಪ್ಪ ಮುರಗೋಡ ಮಾನಿಂಗಪ್ಪ ಮುರನಾಳ, ಗೋಪಣ್ಣ ಕದಂ ಮೊದಲಾದ ಪೈಲವಾನರು ಮುನವಳ್ಳಿಯನ್ನು ಪ್ರತಿನಿಧಿಸಿ ನಾಡಿನೆಲ್ಲೆಡೆ ಜರುಗುವ ಕುಸ್ತಿ ಸ್ಪರ್ಧೆಗಳಲ್ಲಿ ಭಾಗವಹಿಸುತ್ತಿದ್ದರಂತೆ.ಈಗ ಜಿಮ್‌ಗಳು ಬಂದಿದ್ದು ಗರಡಿಮನೆಗಳ ಬಳಕೆ ಕಡಿಮೆಯಾಗಿದ್ದು ಕೆಲವು ಗರಡಿ ಮನೆಗಳು ಇಂದಿಗೂ ಇವೆ. [29]

### 4.14 ಶತಮಾನೋತ್ಸವದ ಸರಕಾರಿ ಶಾಲೆ

ಮುನವಳ್ಳಿ ಮುನಿಪುರವಾಗಿ ಗುರುಪರಂಪರೆ ಹೊಂದಿದ ಮಠಮಾನ್ಯಗಳಿಂದ ಖ್ಯಾತಿ ಗಳಿಸಿದಂತೆಯೇ ಶೈಕ್ಷಣಿಕವಾಗಿಯೂ ಕೂಡ ತನ್ನದೇ ಆದ ವೈಶಿಷ್ಟತೆಯನ್ನು ಹೊಂದಿದೆ. ಪ್ರಾಥಮಿಕ ಹಂತದಿಂದ ಹಿಡಿದು ಪದವಿ ಹಂತ. ವೃತ್ತಿ ಶಿಕ್ಷಣ ಹೀಗೆ ಎಲ್ಲ ವಿಧದ ಶೈಕ್ಷಣಿಕ ಸಂಸ್ಥೆಗಳಿಂದ ಕಾರ್ಯಾರಂಭ ಮಾಡಿವೆ.ಅಂಥದುರಲ್ಲಿ ಸರಕಾರಿ ಶಾಲೆಯೊಂದು ಶತಮಾನ ಪೂರೈಸಿ ಇಂದಿಗೂ ತನ್ನದೇ ಆದ ನೆಲೆಯೊಂದಿಗೆ ಕಾರ್ಯಗೈಯುತ್ತಿದೆ.

01-04-1861 ರಲ್ಲಿ ಆರಂಭವಾಗಿರುವ ಸರಕಾರಿ ಕನ್ನಡ ಗಂಡು ಮಕ್ಕಳ ಮಾದರಿ ಶಾಲೆ ಸುಮಾರು 150 ವರ್ಷಗಳ ಇತಿಹಾಸವನ್ನು ತನ್ನಲ್ಲಿ ಹುದುಗಿಸಿಕೊಂಡಿದೆ.ಒಟ್ಟು 5 ಎಕರೆ 10

28. ಸಂದರ್ಶನ, ಗಂಗಾಧರಯ್ಯ ದೇ. ಪಾಲನಕರ, 5-3-2013, ವಯಸ್ಸು - 62
29. ಸಂದರ್ಶನ, ಶ್ರೀಶೈಲಸ್ವಾಮಿ ಸಂಬಾಳಮಠ, ದಿನಾಂಕ 4-3-2013, ವಯಸ್ಸು- 75

ಗುಂಟೆ ಶಾಲೆಯ ಕ್ಷೇತ್ರವಿದ್ದು ಇದರಲ್ಲಿ 3 ಎಕರೆ 10 ಗುಂಟೆ ಅಟದ ಮೈದಾನವಿದೆ.ಈ ಶಾಲೆಯು ಮೊದಲು ವಿರಕ್ತಮಠ ಹಾಗೂ ವಿಠೋಬಾ ಮಂದಿರದಲ್ಲಿ ಆರಂಭಗೊಂಡು ಸ್ವಾತಂತ್ರ್ಯಾ ನಂತರ ಪಂಚಲಿಂಗೇಶ್ವರ ದೇವಸ್ಥಾನದ ಹತ್ತಿರ ಕರಮಟ್ಟಿ ಗುಡ್ಡದ ಪ್ರದೇಶದಲ್ಲಿ ನೆಲೆನಿಂತಿರುವುದು.

ಇಲ್ಲಿ ಕಲಿತ ವಿದ್ಯಾರ್ಥಿಗಳನೇಕರು ದೇಶ ವಿದೇಶಗಳಲ್ಲಿ ತಮ್ಮದೇ ಆದ ಖ್ಯಾತಿಯಲ್ಲಿದ್ದರೆ. ಇಲ್ಲಿ ಸೇವೆ ಸಲ್ಲಿಸಿದ ಅನೇಕ ಶಿಕ್ಷಕರು ವಿವಿಧ ಹುದ್ದೆಗಳಲ್ಲಿ ಬಡ್ತಿ ಹೊಂದಿದ್ದಲ್ಲದೇ ತಾಲೂಕು.ಜಿಲ್ಲೆ.ರಾಜ್ಯ ಪ್ರಶಸ್ತಿಗಳನ್ನು ಕೂಡ ಪಡೆದಿದ್ದು ಅಂಥವರಲ್ಲಿ ಹ.ಬ.ಅಸೂಟಿ ರಾಜ್ಯ ಪ್ರಶಸ್ತಿ ವಿಭೂಷಿತ ಶಿಕ್ಷಕರು ಇವರು ಪ್ರೌಢಶಾಲೆಗೆ ಬಡ್ತಿ ಹೊಂದಿ ನಂತರ ಶಾಲಾ ತಪಾಸಣಾಧಿಕಾರಿಗಳಾಗಿ ನಿವೃತ್ತರಾಗಿದ್ದು.ಅನೇಕ ವಿದ್ಯಾರ್ಥಿಗಳು ರಾಜಕೀಯ, ಸಾಮಾಜಿಕ, ಧಾರ್ಮಿಕ, ಶೈಕ್ಷಣಿಕ ರಂಗಗಳಲ್ಲಿ ಅಮೋಘ ಸಾಧನೆಗೈದಿರುವರು.

ಕಳೆದ ವರ್ಷ 2012-13 ನೇ ಸಾಲಿನಲ್ಲಿ ಈ ಶಾಲೆಯ ವಾಲಿಬಾಲ್ ತಂಡದ ವಿದ್ಯಾರ್ಥಿಗಳು ರಾಜ್ಯ ಮಟ್ಟಕ್ಕೆ ಅರ್ಹತೆ ಪಡೆದು ಪ್ರಶಸ್ತಿ ಗಳಿಸಿದ್ದಲ್ಲದೇ ಶಾಲೆಯಲ್ಲಿ ವಿಜ್ಞಾನ ಕೊಠಡಿ.ಸುಸಜ್ಜಿತ ಗ್ರಂಥಾಲಯ. ಉತ್ತಮ ಶೌಚಾಲಯ. ದಕ್ಷ ಮುಖ್ಯೋಪಾಧ್ಯಾಯ ಮತ್ತು ಶಿಕ್ಷಕರನ್ನು ಒಳಗೊಂಡು ಸರಕಾರದ ಎಲ್ಲ ಯೋಜನೆಗಳನ್ನು ಸಮರ್ಪಕವಾಗಿ ಮಕ್ಕಳಿಗೆ ತಲುಪಿಸುವ ಜೊತೆಗೆ ಇಲಾಖೆಯ ಪ್ರತಿಭಾ ಕಾರಂಜಿ.ಇನ್ಸಪೈರ್ ಅವಾರ್ಡ.ಟಿ.ಎಲ್.ಎಂ ಮೇಳ. ಇತರ ಎಲ್ಲ ಶೈಕ್ಷಣಿಕ ಚಟುವಟಿಕೆಗಳಲ್ಲಿ ಇಲ್ಲಿಯ ಮಕ್ಕಳು ಭಾಗವಹಿಸುವ ಜೊತೆಗೆ ತಾಲೂಕು ಜಿಲ್ಲಾ ಹಂತದವರೆಗೂ ಪ್ರಶಸ್ತಿಗೆ ಭಾಜನರಾಗಿರುವರು.

### 4.15 ಮುನವಳ್ಳಿ ಜೈಂಟ್ಸ್ ಗ್ರೂಪ್

ಮುನವಳ್ಳಿಯಲ್ಲಿಂದು ಅನೇಕ ಸಂಘ-ಸಂಸ್ಥೆಗಳಿವೆ.ಮೊದಲಿನಿಂದಲೂ ಲಯನ್ಸ ಕ್ಲಬ್ ಅನೇಕ ಚಟುವಟಿಕೆಗಳನ್ನು ಮಾಡುತ್ತ ಬಂದಿತ್ತು.ಇತ್ತೀಚಿನ ವರ್ಷಗಳಲ್ಲಿ ಅಂತರಾಷ್ಟ್ರೀಯ ಸಂಸ್ಥೆಯೊಂದರ ಹೆಸರಿನಲ್ಲಿ ಎಲ್ಲ ರಂಗಗಳಲ್ಲಿ ಸೇವೆ ಸಲ್ಲಿಸಬೇಕು.ಸಮಾಜದ ಪ್ರತಿಯೊಬ್ಬರಿಗೂ ತಮ್ಮ ಸೇವೆಯ ಸೌಲಭ್ಯ ಸಿಗಬೇಕು ಎನ್ನುವ ಮಹದಾಸೆಯೊಂದಿಗೆ ಜೈಂಟ್ಸ್ ಗ್ರೂಪ್ ಆಫ್ ಮುನವಳ್ಳಿ 23-03-2006 ರಲ್ಲಿ ಸ್ಥಾಪನೆಗೊಂಡಿತು. ಸಹಕಾರಿ ಧುರೀಣ, ಸಾಮಾಜಿಕ, ಧಾರ್ಮಿಕ, ರಾಜಕೀಯ ಕಾರ್ಯಕ್ರಮಗಳ ಸಂಘಟಿಕರಾದ ಶ್ರೀ ಉಮೇಶ ಬಾಳಿ ಅವರ ನೇತೃತ್ವದಲ್ಲಿ ಸ್ಥಾಪನೆ ಗೊಂಡಿತು.

ಇದರ ಇನ್ನೊಂದು ಮಹತ್ವದ ಅಂಶವೆಂದರೆ ಪ್ರತಿ ವರ್ಷವೂ ಅಧ್ಯಕ್ಷತೆಯನ್ನು ಬದಲಾವಣೆಯ ಮಾಡುವ ಮೂಲಕ ಸರ್ವರಿಗೂ ಆ ಸ್ಥಾನ ಸಿಗುವಂತೆ ಮಾಡಿ ಎಲ್ಲರ ನೇತೃತ್ವದಲ್ಲಿ ಕಾರ್ಯ ಚಟುವಟಿಕೆಗಳು ನಡೆಯುವಂತೆ ಮಾಡುವುದು.ಗೀಗೆ ಅವರ ಚಟುವಟಿಕೆಗಳು ನಡೆಯುತ್ತ ಬಂದಿದ್ದು ಮಕ್ಕಳ ದಿನಾಚರಣೆಯಂದು ಮುನವಳ್ಳಿ ವ್ಯಾಪ್ತಿಯ ಎಲ್ಲ ಶಾಲೆಗಳ ವಿದ್ಯಾರ್ಥಿಗಳಿಗೆ ಸಮೂಹ ನೃತ್ಯ ಪ್ರದರ್ಶನ, ವಿವಿಧ ಕ್ಷೇತ್ರಗಳಲ್ಲಿ ಸಾಧನೆಗೈದ ವಿದ್ಯಾರ್ಥಿಗಳಿಗೆ ಸನ್ಮಾನ.ಶಿಕ್ಷಕ ದಿನಾಚರಣೆಯಂದು ಶಿಕ್ಷಕರಿಗೆ ಆದರ್ಶ ಶಿಕ್ಷಕ ಪ್ರಶಸ್ತಿ ವಿತರಣೆ, ಶಿಕ್ಷಕರಿಗೆ ವಿವಿಧ ಮನರಂಜನಾ ಸ್ಪರ್ಧೆಗಳನ್ನು ಏರ್ಪಡಿಸಿ ಶಿಕ್ಷಕರಿಗೆ ಸೂಕ್ತ ಗೌರವ ನೀಡಲಾಗಿದೆ.

ರೋಗಿಗಳ ಸೇವೆಯೇ ದೇವರ ಸೇವೆ ಎಂದು ನಂಬಿ ತಮ್ಮನ್ನೇ ಸೇವಾ ಕ್ಷೇತ್ರಕ್ಕೆ ಅರ್ಪಿಸಿಕೊಂಡ ವೈದ್ಯರಿಗೆ ಕೃತಜ್ಞತೆಯಿಂದ ಗೌರವಪೂರ್ವಕವಾಗಿ ಸನ್ಮಾನಿಸಲಾಗಿದೆ. ಪ್ರಜಾಪ್ರಭುತ್ವದಲ್ಲಿ ನಾಲ್ಕನೆಯ ಅಂಗವಾಗಿ ಕಾರ್ಯನಿರ್ವಹಿಸುತ್ತಿರುವ ಪತ್ರಿಕಾ ರಂಗ ಹಾಗೂ ಅದರಲ್ಲಿ ಸೇವೆ ಸಲ್ಲಿಸುತ್ತಿರುವ ಪತ್ರಿಕಾ ಬರಹಗಾರರಿಗೆ ಸತ್ಕಾರ ಅವರ ಕಾರ್ಯವನ್ನು ಸಮಾಜಕ್ಕೆ ತಿಳಿಸಿಕೊಡಲಾಗಿದೆ.

ಭಾರತ ದೇಶ ಕೃಷಿ ಪ್ರಧಾನ ದೇಶ ಇಲ್ಲಿಯ ರೈತರಿಗೆ ಬೆಳೆ ಬೆಳೆಯುವ ಪದ್ಧತಿ, ಬೆಳೆಗಳ ನಿರ್ವಹಣೆ, ಕೀಟಗಳ ಹತೋಟಿ, ಮಣ್ಣಿನ ರಕ್ಷಣೆ, ನೀರಿನ ಸದ್ಬಳಕೆ, ವಿವಿಧ ಬೆಳೆಗಳ ಕ್ಷೇತ್ರೋತ್ಸವ, ಜಾನುವಾರುಗಳ ಆರೋಗ್ಯ ತಪಾಸಣೆ, ಉಚಿತ ಔಷಧಿ ವಿತರಣೆ, ಮೊದಲಾದವುಗಳ ಕುರಿತು ಸಮಗ್ರ ಮಾಹಿತಿ ನೀಡುವಲ್ಲಿ ಜೈಂಟ್ಸ್ ಗ್ರೂಪ್ ಶ್ರಮಿಸುತ್ತಿದೆ.

ಮಳೆ ನೀರು ಕೊಯ್ಲು, ಶುದ್ಧ ಕುಡಿಯುವ ನೀರು, ಕುಡಿಯುವ ನೀರಿನ ಸದ್ಬಳಕೆ ಕುರಿತು ಸಾರ್ವಜನಿಕರಿಗೆ ಕರಪತ್ರಗಳ ಮೂಲಕ ಮಾಹಿತಿ ನೀಡುವಲ್ಲಿ ಮಹತ್ವದ ಪಾತ್ರ ವಹಿಸಿದೆ.ಪರಿಸರ ರಕ್ಷಣೆಯಲ್ಲಿ ಜೈಂಟ್ಸ್ ಗ್ರೂಪ್ ಹಿಂದೆ ಬಿದ್ದಿಲ್ಲ ಮುನವಳ್ಳಿ ಸುತ್ತಮುತ್ತಲಿನ ಗ್ರಾಮಗಳಲ್ಲಿ, ನಾನಾ ಶಾಲೆ ಕಾಲೇಜುಗಳಲ್ಲಿ ವನಮಹೋತ್ಸವ ಆಚರಣೆ ಮಾಡಿ ವಿವಿಧ ತರಹದ ಸಸಿಗಳನ್ನು ನೆಡಲಾಗಿದೆ.

ಮಹಿಳೆಯರು ಅಬಲೆಯರಲ್ಲ ಸಬಲರು ಅವರಿಂದ ಸಮಾಜಕ್ಕೆ. ದೇಶಕ್ಕೆ ಮಹತ್ತರ ಕೊಡುಗೆ ಸಲ್ಲಲಿ ಎನ್ನುವಸದುದ್ದೇಶದಿಂದ ಮಹಿಳೆಯರಿಗೆ ವಿವಿಧ ಕಾರ್ಯಕ್ರಮ, ವಿವಿಧ ರಂಗಗಳಲ್ಲಿ ಸಾಧನೆಗೈದ ಮಹಿಳೆಯರಿಗೆ ಸನ್ಮಾನ ಕಾರ್ಯಕ್ರಮವನ್ನು ಆಯೋಜಿಸಲಾಗಿದೆ.

ಇಂದಿನ ಮಗು ನಾಳಿನ ಪ್ರಜೆ ಎನ್ನುವಂತೆ ಚಿಕ್ಕ ಮಕ್ಕಳಿಗಾಗಿ ಆರೋಗ್ಯವಂತ ಶಿಶು ಸ್ಪರ್ಧೆ, ಮಕ್ಕಳ ಆರೋಗ್ಯ ತಪಾಸಣೆ ಮೊದಲಾದ ಕಾರ್ಯಕ್ರಮಗಳನ್ನು ಹಮ್ಮಿಕೊಳ್ಳಲಾಗಿದೆ.ಆರೋಗ್ಯ ಕ್ಷೇತ್ರದಲ್ಲಿ ರಕ್ತದಾನ, ಎಲುಬು ಕೀಲು ತಪಾಸನೆ, ಮಧುಮೇಹ, ದಂತ ಚಿಕಿತ್ಸೆ, ಉಚಿತ ಔಷಧಿ ವಿತರಣೆ, ಮೊಣಕಾಲು ನೋವಿಗೆ ಆಯಸ್ಕಾಂತ ಚಿಕಿತ್ಸೆ, ಮೊದಲಾದ ರಚನಾತ್ಮಕ ಕಾರ್ಯಕ್ರಮಗಳನ್ನು ಹಮ್ಮಿಕೊಳ್ಳಲಾಗಿದೆ.

ಕಾರ್ಮಿಕ ದಿನಾಚರಣೆಯಂದು ಬಸ್ ನಿಲ್ದಾಣದಲ್ಲಿ ಹಮಾಲರಿಗೆ ಸನ್ಮಾನ, ಎ.ಪಿ.ಎಂ.ಸಿ. ಯಾರ್ಡನಲ್ಲಿ ಪ್ರತಿವರ್ಷ ಹಮಾಲರಿಗೆ ವಸ್ತ್ರದಾನ, ಮಹಿಳಾ ಕಾರ್ಮಿಕರಿಗೆ ಸನ್ಮಾನ ಏರ್ಪಡಿಸಲಾಗಿದೆ. ಧಾರ್ಮಿಕ ಕ್ಷೇತ್ರದಲ್ಲೂ ಜೈಂಟ್ಸ್ ಗ್ರೂಪ್ ಕಾರ್ಯ ನಿರ್ವಹಿಸಿದೆ. ಮುಸಲ್ಮಾನರ ಪವಿತ್ರ ಹಬ್ಬ ರಮಜಾನ್ ತಿಂಗಳಲ್ಲಿ ರೋಜಾ (ಉಪವಾಸ)ಮಾಡಿದವರಿಗಾಗಿ ಮಸೀದೆಗಳಿಗೆ ಹೋಗಿ ಖರ್ಜೂರ ವಿತರಿಸಿದ್ದಾರೆ. ಶ್ರಾವಣ ಮಾಸದಲ್ಲಿ ಪುಣ್ಯಚರಿತ್ರಾ ಶ್ರವಣವಾಗಬೇಕೆಂದು ಅನುಭಾವಿಗಳಿಂದ ಧಾರ್ಮಿಕ ಪ್ರವಚನ ಏರ್ಪಡಿಸಿದ್ದಾರೆ. ಹೆಣ್ಣು ಭ್ರೂಣ ಹತ್ಯೆ ತಡೆಯಲು ಪ್ರತ್ಯೇಕ ವಿಭಾಗ ಮಾಡಿಕೊಂಡು ಜಾಗೃತಿ ಕಾರ್ಯಕ್ರಮ ಹಮ್ಮಿಕೊಳ್ಳಲಾಗಿದೆ.

ಒಟ್ಟಾರೆ ಸಮಾಜದ ವಿವಿಧ ರಂಗಗಳನ್ನು ಆಯ್ಕೆ ಮಾಡಿಕೊಂಡು ಅದರಲ್ಲಿ ಶ್ರಮವಹಿಸಿದ ಜನರಿಗೆ ಸನ್ಮಾನ ವಿವಿಧ ರಂಗದ ಪ್ರತಿಭೆಗಳ ಸನ್ಮಾನ ಕೆಳ.ಮಧ್ಯಮ ವರ್ಗದ ಜನರಿಗೆ ಸಹಾಯ ಇತ್ಯಾದಿ ಕಾರ್ಯ ಚಟುವಟಿಕೆಗಳನ್ನು 2006 ರಿಂದ ಇಲ್ಲಿಯವರೆಗೂ ಹಮ್ಮಿಕೊಂಡು ತನ್ನದೇ ಆದ ದಿಸೆಯಲ್ಲಿ ಮುನವಳ್ಳಿ ಜೈಂಟ್ಸ್ ಗ್ರೂಪ್ ತನ್ನ ಸೇವೆಯಲ್ಲಿ ತೊಡಗಿರುವುದು. ಇದರ ಎಲ್ಲ ಸದಸ್ಯರೂ ಸೇವಾ ಮನೋಭಾವವುಳ್ಳವರಾಗಿದ್ದು ರಚನಾತ್ಮಕ ಕಾರ್ಯಗಳನ್ನು ಕೈಗೊಳ್ಳುವ ಮೂಲಕ ಮುನವಳ್ಳಿ ಅಷ್ಟೇ ಅಲ್ಲ ಜಿಲ್ಲೆಯಾದ್ಯಂತ ಜೈಂಟ್ಸ್ ಗ್ರೂಪ್ ಹೆಸರನ್ನು ಖ್ಯಾತಿಗೊಳಿಸಿರುವರು.



## ಅಧ್ಯಾಯ – ಐದು
## ಸ್ಥಳೀಯ ಆಚರಣೆ–ನಂಬಿಕೆಗಳು

**ಜಾತ್ರೆಗಳು**

ಮುನವಳ್ಳಿಯಲ್ಲಿ ಜಾತ್ರೆಗಳು ಮತ್ತು ಆರಾಧನೆಗಳು ಕೂಡ ತನ್ನದೇ ಸಾಂಸ್ಕೃತಿಕ ನೆಲೆಗಟ್ಟನ್ನು ಹೊಂದಿವೆ. ಮಹಾಶಿವರಾತ್ರಿ ಅಮವಾಸೆಯಂದು ಜರುಗುವ ಪಂಚಲಿಂಗೇಶ್ವರ ಜಾತ್ರಾ ಮಹೋತ್ಸವ. ಜನೇವರಿ ತಿಂಗಳಲ್ಲಿ ಮಲಪ್ರಭಾ ನದಿಯಲ್ಲಿ ಜರುಗುವ ತೆಪ್ಪೋತ್ಸವ.ಶ್ರಾವಣ ಮಾಸದಲ್ಲಿ ಜರುಗುವ ವಿಠ್ಠಲ ಮಂದಿರದ ಆರಾಧನಾ ಉತ್ಸವ.ಕಾರ್ತಿಕ ಮಾಸದಲ್ಲಿ ಜರುಗುವ ವೆಂಕಟೇಶ್ವರ ರಥೋತ್ಸವ, ದೀಪಾವಳಿ ಸಂದರ್ಭದಲ್ಲಿ ಜರುಗುವ ಕಾಳಿಕಾ ಉತ್ಸವ,ಮುಸ್ಲಿಂ ಬಾಂಧವರ ಮೋಹರಂ. ಕಾಮದಹನ. ಮೊದಲಾದ ಹಬ್ಬಗಳು ವಿಶಿಷ್ಟ ರೀತಿಯಲ್ಲಿ ಆಚರಣೆಯಲ್ಲಿದ್ದು ಮುನವಳ್ಳಿ ಸಾಂಸ್ಕೃತಿಕ ಪರಂಪರೆಯನ್ನು ಎತ್ತಿಹಿಡಿದಿವೆ.ಮುಂಚೆ ನಾಗಪಂಚಮಿ ಹಬ್ಬವನ್ನು ಕೂಡ ಇಲ್ಲಿ ಸಡಗರದಿಂದ ಆಚರಿಸುತ್ತಿದ್ದರು. ಇಲ್ಲಿ ವೀರಭದ್ರ ದೇವರ ಗುಡಿಯ ಹಿಂದೆ. ಕಲ್ಮಠದ ಕಟ್ಟೆಯ ಮೇಲೆ. ಹೊಳೆ ದಂಡೆಯ ಆಲದ ಮರದ ಕೆಳಗೆ ನಾಗಪ್ಪನ ಕಟ್ಟೆಗಳಿದ್ದವು. ಊರಿನ ಜನರೆಲ್ಲ ಮೊದಲು ಅಲ್ಲೆಲ್ಲ ಹಾಲು ಎರೆಯುವ ಮೂಲಕ ನಾಗಪಂಚಮಿ ಆಚರಿಸುತ್ತಿದ್ದರು.

**5.1 ಕಾಮದಹನ(ಹೋಳಿ ಹಬ್ಬ)**

ಹೋಳಿ ಹಬ್ಬ ಬಂತೆಂದರೆ ಗ್ರಾಮಸ್ಥರಿಗೆ ಎಲ್ಲಿಲ್ಲದ ಸಡಗರ.ಅದರಲ್ಲೂ ನೇಕಾರ ಓಣಿಯ ಕಾಮದಹನ ಅತಿ ವಿಜೃಂಭಣೆಯ ಜೊತೆಗೆ ಶ್ರೀಶೈಲಸ್ವಾಮಿ ಸಂಭಾಳಮಠರು ತಯಾರಿಸುವ ರತಿ ಮನ್ಮಥ ಮೂರ್ತಿಯ ಕಳೆ ಹೇಳತೀರದ್ದು. ಚಿಕ್ಕವರಿಂದ ಹಿಡಿದು ಮುದುಕರವರೆಗೂ ಹಲಗೆ ಬಾರಿಸುತ್ತ ಕಾಮಣ್ಣನ ಹಾಡು ಹೇಳುತ್ತ ಬಣ್ಣದಾಟವಾಡುವ ಹೋಳಿ ಸಂದರ್ಭದಲ್ಲಿ "ಕಾಮಣ್ಣನ ಮಕ್ಕಳು ಕಳ್ಳ ಸೂಳೇ ಮಕ್ಕಳು.ಏನೇನು ಕದ್ದರು.? ಕುಳ್ಳು ಕಟ್ಟಿಗೆ ಕದ್ದರು.ಯಾತಕ್ಕ ಕದ್ದರು.? ಕಾಮಣ್ಣ ಸುಡಲಿಕ್ಕೋ." ಎಂದು ಜೋರಾಗಿ ಚೀರಾಡುತ್ತ ಲಬಾ ಲಬಾ ಹೊಯ್ಕೋಳ್ಳುವರು.ಮೊದಲ ದಿನ ಸಾರ್ವಜನಿಕ ಕಾಮದಹನ ಮಾಡಿ ಬಣ್ಣದಾಟ ಆಡುವ ಜನರು ಅಂದು ಸಂಜೆ ನೇಕಾರ ಓಣಿಯಲ್ಲಿ ಮುಳ್ಳುಗುದುರೆ ಆಟ ಆಡುವರು.

ಆಗ ಮುಳ್ಳು ಹೊಂದಿದ ಗಿಡದ ಟೊಂಗೆಗಳನ್ನು ತಂದು ಅದರ ಮೇಲೆ ಕುಳಿತು ಕರೆಮ್ಮನ ದೇವಾಲಯ ಸುತ್ತು ಹಾಕುತ್ತ ಬಣ್ಣ ಎರಚುತ್ತ ಸಾಗುವರು.ಯಾರು ಆ ಬಣ್ಣದ ರಭಸಕ್ಕೆ ಮುಳ್ಳುಗುದುರೆಯಿಂದ ಹಿಂದೆ ಸರಿಯುವುದಿಲ್ಲವೋ ಅವರು ಗೆದ್ದಂತೆ.ಆಡುವರು. ಮರುದಿನ ನೇಕಾರ ಕಾಮದಹನದರ ಸಡಗರವಂತೂ ಹೇಳತೀರದ್ದು ರತಿ ಮನ್ಮಥರ ಮೆರವಣಿಗೆ ದೃಶ್ಯ ವೈಭವ ಜೊತೆಗೆ ಬೇಗ ಮಾಸದ ನೇಕಾರ ಬಣ್ಣ ವಾರಗಟ್ಟಲೇ ಉಳಿದುಕೊಳ್ಳುವಂತೆ ಬಣ್ಣ ಕಲಿಸಿರುವರು.ಹೀಗಾಗಿ ನೇಕಾರ ಬಣ್ಣ ಆಡಬೇಕು ಎಂಬ ಹುಮ್ಮಸ್ಸು ಯುವ ತರಣರದ್ದು.

ಅದರ ಮಾರನೆಯ ದಿನ ಸಂಜೆ ಹೋಳಿ ಹಣಮಪ್ಪನ ಆರಾಧನೆಯ ಹೆಸರಿನಲ್ಲಿ ಇಬ್ಬರು ಹುಡುಗರು ಸ್ತ್ರೀ ವೇಷಧಾರಿಗಳಾಗಿ ನಕರಾ ಮಾಡುತ್ತ ಅವರಿಗೆ ಕೆಂಪು ಮತ್ತು ಹಸಿರು ಬಣ್ಣದ ಹೊಂಡದಲ್ಲಿಯ ನೀರನ್ನು ಗೊಜ್ಜುವ ಹಿಡುಗರು ಚೇಷ್ಟೇ ಮಾಡುತ್ತ ಸಾಗುವಾಗ ಗಿಡದ ಎಳೆಗಳಿಂದ ಅವರು ಹುಡುಗರಿಗೆ ಬಾರಿಸುತ್ತ ಸಾಗುವಾಗ ಯಾರು ಅವರನ್ನು ಹೊತ್ತು ಹೊಂಡದಲ್ಲಿ ಮುಳುಗಿಸುವರೋ ಅವರು ಗೆದ್ದಂತೆ ಎಂಬ ಮೋಜಿನಾಟ ಕೂಡ ನೀರು ಓಕುಳಿಯಾಟದ ಹೆಸರಿನಲ್ಲಿ ಜರುಗುತ್ತದೆ. ಹೀಗೆ ವಿಭಿನ್ನ ಶೈಲಿಯಲ್ಲಿ ಹೋಳಿ ಹಬ್ಬ ಆಚರಿಸುವ ಮೂಲಕ ಹೋಳಿ ಹುಣ್ಣಿಮೆ ಆಚರಣೆ ಮುನವಳ್ಳಿಯಲ್ಲಿ ಜರುಗುತ್ತದೆ.

ಈ ಮೊದಲು ಸೂಲಕಟ್ಟಿ ಅಗಸಿಯಲ್ಲಿನ ಕಾಮನನ್ನು ಹೊಲೆಯರು(ಮಾದರ) ತಯಾರಿಸಿ ಕುಳ್ಳು(ಸಗಣಿಯಿಂದ ತಯಾರಿಸಿದ್ದು) ತಂದು ಕುಳ್ಳಿನಲ್ಲಿಯೇ ಸುಡುವ ಸಂಪ್ರದಾಯವಿತ್ತು.ಆ ಸಂದರ್ಭ ಕಾಮನಿಗೆ ಇಲ್ಲಿನ ಗೌಡರಾದ ಪಿ.ಡಿ.ಪಾಟೀಲರ ಮನೆಯಲ್ಲಿ ತಯಾರಿಸಿದ ಅಡುಗೆಯನ್ನು ಬೆಳಗಿನ ಜಾವ ತಗೆದುಕೊಂಡು ಹೋಗಿ ಆ ಮನೆತನದವರು ಪೂಜಿಸಿ ಎಡೆ ಹಿಡಿದು ಅವರೇ ಕಿಚ್ಚು ಹಚ್ಚುತ್ತಿದ್ದರು.ನಂತರ ಆ ಕಿಚ್ಚನ್ನು ತಗೆದುಕೊಂಡು ಹೋಗಿ ಮತ್ತೊಂದು ಕಾಮದಹನ ಜರುಗುತ್ತಿತ್ತು. ಅಂದರೆ

ಗೌಡರ ಮನೆತನದ ಪೂಜೆಯ ಮೂಲಕ ಕಾಮದಹನ ಆರಂಭದ ಸೂಚನೆ.ಒಟ್ಟಾರೆ ಹುಬ್ಬಾ ನಕ್ಷತ್ರದ ಆಗಮನದೊಂದಿಗೆ ಆರಂಭವಾಗುವ ಈ ಹುಣ್ಣಿಮೆಯ ಚಟುವಟಿಕೆಗಳು ಬೆಳಗಿನ ಜಾವ ಸುಡುವ ಕಾಮನೊಂದಿಗೆ ಬೆಳಗಿನ ನಂತರ ಚುಳಕಿ ಕಾಮ(ಚಂದ್ರಶೇಖರ ಮಠ) ಹಾಗೂ ಪೇಟೆಯ ಕಾಮದಹನವಾಗುವ ಮೂಲಕ ಮೊದಲದಿನ ಬಣ್ಣದಾಟ ಜರುಗಿದರೆ.ಮರುದಿನ ಅಂದರೆ ಕರಿದಿನ ಬಣಗಾರ ಓಣಿ.ನೇಕಾರ ಓಣಿಯ ಕಾಮದಹನವಾಗುವುದು. ಹೀಗಾಗಿ ಮುನವಳ್ಳಿಯಲ್ಲಿ ಎರಡು ದಿನ ಓಕುಳಿಯಾಟ ಜರುಗುತ್ತ ಬಂದಿದೆ.

### 5.2 ಮೋಹರಂ

ಮುನವಳ್ಳಿಯಲ್ಲಿ ಆಲಕಟ್ಟಿ ಮಸೂತಿ(ಹಿಂದೂ–ಮುಸ್ಲಿಂ ಫಕೀರಸ್ವಾಮಿ), ಟೀಪು ಸುಲ್ತಾನ ನಗರ ಮಸೀದೆ.ಬಾರಾ ಇಮಾಮ ಮಸೀದೆ. ಪಟವೇಗಾರ ಓಣಿ ಮಸೀದೆ.ಬೀಬಿ ಫಾತೀಮಾ ಮಸೀದೆ. ಹಸೇನ–ಹುಸೇನ ಮಸೀದೆ. ಇತ್ಯಾದಿ ಹಲವು ಮಸೀದೆಗಳಿದ್ದು ಅರಬಸ್ತಾನದ ಕೂಪಾ ಪ್ರಾಂತ್ಯದ ಕರ್ಬಲಾದಲ್ಲಿ ನಡೆದ ಧರ್ಮಯುದ್ಧ ಹಾಗೂ ಬಲಿದಾನಗಳ ನೆನಪಿಗಾಗಿ ಈ ಮೋಹರಂ ಆಚರಿಸುತ್ತ ಬಂದಿದ್ದು.ಗುದ್ದಲಿ ಹಾಕುವುದರಿಂದ ಹಿಡಿದು ಮೊದಲ ದಿನ ಖತಲ್ ರಾತ್ರಿ ಹಾಗೂ ಮೊಹರಂ ಕೊನೆಯ ದಿನದವರೆಗಿನ ಆಚರಣೆ ಇಲ್ಲಿ ಹಿಂದೂ ಮುಸ್ಲಿಂ ಎಲ್ಲರೂ ಒಗ್ಗಟ್ಟಿನಿಂದ ಆಚರಿಸಿಕೊಂಡು ಬರುತ್ತಿರುವುದು ಸರ್ವಧರ್ಮದ ಸಮನ್ವಯದ ಸಂಕೇತ ಎಂದು ಹೇಳಬಹುದು.

ಮುಸ್ಲಿಂರ ಎಲ್ಲ ಹಬ್ಬಗಳೂ ಚಂದ್ರದರ್ಶನ ಅವಲಂಬಿಸಿರುವಂತೆ ಮೋಹರಂ ಕೂಡ ಚಂದ್ರದರ್ಶನದ ಮೂಲಕ ಪ್ರಾರಂಭವಾಗುತ್ತದೆ. ಮಸೀದೆಯ ಪ್ರಾಂಗಣದಲ್ಲಿ ಗುದ್ದಲಿ

ಹಾಕುವುದರೊಂದಿಗೆ ದೇವರನ್ನು ಕೂಡ್ರಿಸಿ ಹತ್ತು ದಿನಗಳ ಕಾಲ ಉಪವಾಸ ವೃತ,,ದಾನ-ಧರ್ಮಗಳನ್ನು ಮಾಡುವ ಮೂಲಕ ಮೋಹರಂ ಆಚರಿಸುವರು.ಹಿಂದೂಗಳು ಕೂಡ ಇಲ್ಲಿ ಮೋಹರಂ ಬರುವ ಕೆಲವು ದಿನಗಳ ಮೊದಲೇ ತಮ್ಮ ಮನೆಗಳಿಗೆ ಸುಣ್ಣ ಬಣ್ಣ ಹಚ್ಚುವ ಮೂಲಕ ಮನೆಯಲ್ಲಿನ ಉಡುಗೆ ತೊಡುಗೆ ಹಾಸಿಗೆ ಇತ್ಯಾದಿಗಳನ್ನೆಲ್ಲ ಸ್ವಚ್ಚಗೊಳಿಸಿ ಮಡಿ ಮಾಡುತ್ತಾರೆ.ನಂತರ ಕೆಲವರು ತಮ್ಮ ಮಕ್ಕಳನ್ನು ಒಳಗೊಂಡಂತೆ ಗಂಡಸರೆಲ್ಲ ಫಕೀರರಾಗುತ್ತಾರೆ.ಹೀಗೆ ಫಕೀರ ಎಂದು ಆಗುವವರ ಮನೆಯಲ್ಲಿ ಮೊದಲಿನಿಂದಲೂ ಈ ಸಂಪ್ರದಾಯ ಆಚರಿಸಿಕೊಂಡು ಬರುತ್ತಿದ್ದು.ಕೆಲವರು ಐದು ದಿನಗಳ ಫಕೀರ ಆದರೆ ಇನ್ನು ಕೆಲವರು ಕೊನೆಯ ದಿನದ ಹಿಂದಿನ ದಿನ ಫಕೀರ ಆಗುವರು. ಇದು ಅವರವರ ಮನೆತನಗಳಲ್ಲಿ ಎಷ್ಟು ದಿನದ ಫಕೀರ ಆಗಬೇಕೆಂಬ ಸಂಪ್ರದಾಯವಿದೆಯೋ ಅಷ್ಟು ದಿನಗಳ ಫಕೀರ ಆಗುವ ಸಂಪ್ರದಾಯ ಹಿಂದೂ ಮುಸ್ಲಿಂ ಎರಡೂ ಕೋಮಿನವರಲ್ಲಿ ಇದೆ.ದೇವರು ಹೊಳೆಗೆ ಹೋಗುವ ದಿನ ಫಕೀರ ಆದ ದಿನದಂದು ಧರಿಸಿದ ಲಾಡಿಯನ್ನು ಡೋಲಿಯಲ್ಲಿ ಹಾಕುವುದು ಅಥವಾ ಅಲಾಯಿ ಮುಚ್ಚಿದ ನಂತರ ಅದರ ಮೇಲೊಂದು ಮುಳ್ಳು ಕಂಟಿ ಅಂದರೆ ಬಾರಿಗಿಡದ ಟೊಂಗೆ(ಬೋರೆ ಹಣ್ಣಿನ ಗಿಡ) ನೆಡುವರು ಅದರಲ್ಲಿ ಕೈಯಲ್ಲಿ ಕಟ್ಟಿದ್ದ ಲಾಡಿಗಳನ್ನು ತೆಗೆದು ಹಾಕುವರು.ದೇವರು ಹೊಳೆಗೆ ಹೋದ ನಂತರ ಮನೆಗೆ ಬಂದು ಸ್ನಾನ ಮಾಡುವರು. ಅಂದರೆ ಫಕೀರ ಆಗುವವರು ಯಾವ ದಿನ ಫಕೀರ ಆಗುತ್ತಾರೋ ಆ ದಿನ ಸ್ನಾನ ಮಾಡಿ ಭಕ್ತಿಯಿಂದ ಎಣ್ಣೆ.ಊಧು,ಎಡೆಯನ್ನು ತಗೆದುಕೊಂಡು ಮಸೀದೆಗೆ ಹೋಗಿ ಅಲ್ಲಿ ತಮ್ಮ ಕೈಯಲ್ಲಿ ದಾರದಿಂದ ಮಾಡಿದ ಲಾಡಿ ಕಟ್ಟಿಸಿಕೊಳ್ಳುತ್ತಾರೆ ಹಾಗೂ ಕೊರಳಲ್ಲಿ ಕೂಡ ಧರಿಸುತ್ತಾರೆ ಅಂದು ಸ್ನಾನ ಮಾಡಿದವರು ದೇವರ ಹೆಸರಿನಲ್ಲಿ ದೇವರು ಹೊಳೆಗೆ ಹೋಗುವ ದಿನದವರೆಗೂ ಸ್ನಾನ ಮಾಡುವುದಿಲ್ಲ. ಕೈಕಾಲು ಮುಖ ಮಾತ್ರ ತೊಳೆದುಕೊಳ್ಳುವರು. ಫಕೀರ ಆಗುವ ದಿನ ಹೊಸ ಬಟ್ಟೆಗಳನ್ನು ಧರಿಸುವರು.ಕೊನೆಯ ದಿನ ದೇವರು ಹೊಳೆಗೆ ಹೋದ ನಂತರ ಸ್ನಾನ ಮಾಡುವುದಲ್ಲದೇ ಮೈಮೇಲಿನ ಬಟ್ಟೆಗಳನ್ನು ಶುಭ್ರಗೊಳಿಸಿಕೊಳ್ಳುವರು.ಇದು ಒಂದೂರಿಗಷ್ಟೇ ಸೀಮಿತವಾಗಿರದೇ ಮುನವಳ್ಳಿ ಸುತ್ತಮುತ್ತಲಿನ ಊರಿನ ಜನರು ಮಸೀದೆಗಳಿಗೆ ಬಂದು ತಮ್ಮ ತಮ್ಮ ಹರಕೆಯನುಸಾರ ದೇವರಿಗೆ ನೈವೇದ್ಯ ಕೊಡುವುದಲ್ಲದೇ ದೇವರ ಮುಂದೆ ಉರಿಯುವ ದೀಪಕ್ಕೆ ಎಣ್ಣೆ ಕೊಡಿಸಿ ಹೋಗುವರು. ಕೊನೆಯ ದಿನ ಪೇಟೆಯ ಪ್ರಮುಖ ರಸ್ತೆಯಲ್ಲಿ ಎಲ್ಲ ಡೋಲಿ ಹಾಗೂ ಕೈ ದೇವರು ಸೇರಿದಾಗ ದೊಡ್ಡ ಜಾತ್ರೆಯೋಪಾದಿಯಲ್ಲಿ ಜನ ಸೇರುವರು.ಆಗ ಗುಂಗಿ ಹುಳವೊಂದು ಡೋಲಿ ಹತ್ತಿರ ಬಂದು ಹೋಗುತ್ತದೆ.ಅದನ್ನು ನೋಡುವ ಕುತೂಹಲ ಹೇಳತೀರದ್ದು. ಆ ಸ್ಥಳದಲ್ಲಿ ಎಲ್ಲ ದೇವರುಗಳ ಭೇಟಿ ಆದ ನಂತರ ತಮ್ಮ ತಮ್ಮ ಮಸೀದೆಗಳಿಗೆ ತೆರಳಿ ಸಂಜೆ ಮತ್ತು ಮಸೀದೆಯಿಂದ ಹೊರಟು ಗ್ರಾಮದ ನದಿಯತ್ತ ಸಾಲಾಗಿ ಎಲ್ಲ ದೇವರುಗಳ ಡೋಲಿ ಮತ್ತು ಕೈದೇವರುಗಳನ್ನು ತಂದು ಮುಖತೊಳೆದು ಪುನಃ ಮಸೀದೆಗೆ ಬಂದು ಯಥಾಸ್ಥಿತಿಯಲ್ಲಿ ಅವುಗಳನ್ನು ತಗೆದಿಡುವ ಮೂಲಕ ಮೋಹರಂ ಆಚರಣೆ ಕೊನೆಗೊಳ್ಳುತ್ತದೆ. ಕೆಲವು ಭಕ್ತರು ದೇವರ ಹರಕೆಯಾಗಿ ಬೆಳ್ಳಿಯ ಕುದುರೆಯನ್ನು ಕೊಡುವುದು ರೂಢಿಯಲ್ಲಿದೆ. ಕೆಲವರು ಪ್ರಾಣಿಬಲಿಯನ್ನು

ಕೊಡುತ್ತಾರೆ ಹೆಚ್ಚು ಜನ ಬೆಳ್ಳಿ ಕುದುರೆ ಅಥವ ಗಾಣದ ಎಣ್ಣೆ ಅಥವ ಪಾಂಜಾಗಳಿಗೆ ರಾತ್ರಿ ಸಂಚರಿಸಲು ಅನುಕೂಲವಾಗಲೆಂದು ಮಾಡಿದ ಹಿಲಾಲ್‌ಗೆ ಸೀಮೆ ಎಣ್ಣೆ ಕೊಡಿಸುವುದು ಹೆಚ್ಚು ಕಂಡು ಬರುತ್ತದೆ.

ಹಿಂದೂ ಮುಸ್ಲಿಂ ಕೋಮಿನವರು ಸೇರಿ ಮಾಡುವ ಈ ಹಬ್ಬದಲ್ಲಿ ಹಿಂದೂ ಜನರು ಕತ್ತಲ ರಾತ್ರಿ ದಿನದಂದು ದೇವರಿಗೆ ಸಕ್ಕರೆಯನ್ನು ಊದಿಸುವುದರ ಜೊತೆಗೆ ಮಾದಲಿಯನ್ನು ಎಡೆ ಮಾಡಿ ಕೊಡುತ್ತಾರೆ. ಮಡಿಯಿಂದ ದಪ್ಪ ರೊಟ್ಟಿಯನ್ನು ಮಾಡಿ ಅದನ್ನು ಸಣ್ಣಗೆ ಮಾಡಿಕೊಂಡು ಬೆಲ್ಲದೊಂದಿಗೆ ಮಿಶ್ರಣ ಮಾಡಿ ಮಾದಲಿ ತಯಾರಿಸುವ ಕಲೆ ಇಂದಿಗೂ ಮಹಿಳೆಯರಲ್ಲಿ ಉಳಿದು ಬಂದಿದೆ. ಅಷ್ಟೇ ಅಲ್ಲ ದೇವರು ಹೊಳೆಗೆ ಹೋಗುವ ದಿನದಂದು ಚೊಂಗೆ ಮಾಡುತ್ತಾರೆ ಇದು ಕೂಡ ವಿಶಿಷ್ಟವಾದ ತಿನಿಸು. ಇದನ್ನು ಸಕ್ಕರೆ ಹಾಗೂ ಬೆಲ್ಲ ಎರಡೂ ರೀತಿಯಲ್ಲಿ ಮಾಡುತ್ತಾರೆ. ಒಟ್ಟಾರೆ ಮೊದಲ ದಿನದಿಂದ ಹಿಡಿದು ಕೊನೆಯ ದಿನದವರೆಗೂ ಮೋಹರಂ ಆಚರಣೆಯಲ್ಲಿ ಹಿಂದೂಗಳ ಪಾತ್ರವೂ ಮಹತ್ವದ್ದಾಗಿದೆ. ಆಲಕಟ್ಟಿ ಮಸೀದೆಯ ಮೋಹರಂನಲ್ಲಂತೂ ಹಿಂದೂಗಳ ಪಾತ್ರ ಪ್ರಮುಖವಾಗಿದೆ. ಕೊನೆಯ ದಿನ ಬೆಳಿಗ್ಗೆ ಹಿರೇಮಠದ ಮನೆತನದವರು ಅಲ್ಲಿ ಹೋಗಿ ಪಾದಪೂಜೆ ಮಾಡಿಸಿಕೊಂಡ ನಂತರ ಕಿಚ್ಚ ಹಾಯುವ ಕಾರ್ಯ ಜರುಗುತ್ತದೆ. ಇದು ಹಿಂದೂ ಮುಸ್ಲಿಂ ಭಾವೈಕ್ಯತೆಯನ್ನು ಎತ್ತಿ ಹಿಡಿಯುತ್ತದೆ. ಇಂದು ಸಂಪ್ರದಾಯಗಳೆಲ್ಲ ಮುರಿದು ಹೋಗಿದ್ದು ಆಚರಣೆಯಲ್ಲಿಯೂ ಅನೇಕ ಬದಲಾವಣೆಗಳಾಗಿದ್ದು ಮೊದಲಿನ ಎಲ್ಲ ಸಡಗರ ಸಂಪ್ರದಾಯಗಳು ಮಾಯವಾಗಿವೆ.

ಮೊದಲು ಅಂದರೆ ಸುಮಾರು ಮೂವತ್ತು ವರ್ಷಗಳ ಹಿಂದೆ ಮೋಹರಂದಲ್ಲಿ ಹಿಂದೂಗಳ ಹೆಜ್ಜೆಮಜಲು ನೋಡಲು ಸುತ್ತಮುತ್ತಲಿನ ಗ್ರಾಮದ ಸಹಸ್ರಾರು ಜನ ಮಸೀದೆಯ ಸ್ಥಳದಲ್ಲಿ ಸೇರುತ್ತಿದ್ದರಂತೆ. ಅದು ಕೂಡ ಹತ್ತು ದಿನದ ಜಾಥಾ ದಿನ ರಾತ್ರಿಯಿಡೀ ಕರಬಲ ಮಜಲು.ಕವ್ವಾಲಿ ಪದಕ್ಕೆ ಗದಗ ಬೆಟಗೇರಿ. ಹುಬ್ಬಳ್ಳಿ-ಧಾರವಾಡ. ನರಗುಂದದಲ್ಲಿನ ತಂಡಗಳು ಇಲ್ಲಿಗೆ ಬರುತ್ತಿದ್ದವು. ಒಂದೊಂದು ತಂಡಕ್ಕೆ ಅರ್ಧ ತಾಸಿನ ಅವಧಿ ನಿಗದಿಪಡಿಸುತ್ತಿದ್ದರು. ಇನ್ನು ಸ್ಥಳೀಯ ಯುವಕರು ಕ್ಯಾಂವಸಿ ಅಂದರೆ ಹೆಜ್ಜೆ ಹಾಕುವ ಕಾರ್ಯದಲ್ಲಿ ನಿರತರಾದರಂತೂ ಅದರ ಹುರುಪು ಹುಮ್ಮಸ್ಸು ಹೇಳತೀರದು ಎಂದು ವಯೋವೃದ್ಧ ಕಲಾವಿದರಾದ ಶ್ರೀಶೈಲಸ್ವಾಮಿ ಸಂಭಾಳಮಠ ಆ ಸೊಗಡನ್ನು ತಮ್ಮ ಮಾತಿನಲ್ಲಿ ವರ್ಣಿಸುವುದು ಹೀಗೆ –

"ಹ್ಞಾಂ ಹೊಕ್ಕಾಳ ಅಂದರೆ ಸಾಕು ತಂಡದ ನಾಕನ ಒಳಗೊಂಡು ಎಲ್ಲರೂ ಹೆಜ್ಜೆ ಹಾಕುತ್ತ ಹಿಂದೆ ಚಲಿಸುತ್ತಿದ್ದರಂತೆ.ಕ್ಯಾಂವಸಿ ಎಂದರೆ ಮುಂದೆ ಹೆಜ್ಜೆ ಹಾಕುತ್ತ ಬರುವುದು ಹೀಗೆ ರಾತ್ರಿಯಿಡೀ ಜನಸಮೂಹದ ಸಿಳ್ಳೆ.ಕೇಕೆ ಜೈಕಾರಗಳ ನಡುವೆ ಹೆಜ್ಜೆ ಹಾಕುವ ರೀತಿ ನಿಜಕ್ಕೂ ಹೇಳತೀರದ್ದು ಬರೀ ಕ್ಯಾಂವಸಿ, ಹ್ಞಾ ಹೊಕ್ಕಾಳ, ಹ್ಞಾ ಬರತಾಳ ಹೀಗೆ ಕೆಲವು ಸಂಜ್ಞೆ ಪದಗಳನ್ನು ಹೇಳುತ್ತ ಹಿಂದೆ

ಮುಂದೆ ಎಡ ಬಲ ತಿರುವಿನಲ್ಲಿ ಹೆಜ್ಜೆ ಹಾಕುವ ಕ್ಯಾಂವಸಿ ಎನ್ನುವ ಆಟ ಸುತ್ತಮುತ್ತಲಿನ ಹಳ್ಳಿಗಳ ಜನರ ಮನಸೂರೆಗೊಂಡಿತ್ತು ಎಂದು ಅಂದಿನ ಮೋಹರಂ ಆಚರಣೆಯನ್ನು ನೆನೆಯುತ್ತಾರೆ.[30]

**5.3 ಗಣೇಶ ಚತುರ್ಥಿ**

ಗಣೇಶ ಚತುರ್ಥಿ ಭಾದ್ರಪದ ಮಾಸದಲ್ಲಿ ಬರುವ ಹಬ್ಬ.ಶ್ರಾವಣ ಮುಗಿದ ಬಳಿಕ ಬರುವ ಅತಿ ಪ್ರಸಿದ್ದ ಹಬ್ಬ ಇದಾಗಿದ್ದು.ಮನೆಗಳಲ್ಲಿ ಮಾತ್ರವಲ್ಲದೇ ಓಣಿ ಓಣಿಗಳಲ್ಲಿ ಗಣೇಶ ಮೂರ್ತಿ ಪ್ರತಿಷ್ಠಾಪಿಸುವ ಮೂಲಕ ನೀರಿನಲ್ಲಿ ವಿಸರ್ಜಿಸುವ ದಿನದವರೆಗೂ ಪ್ರತಿನಿತ್ಯ ಒಂದಲ್ಲ ಒಂದು ಸಾಂಸ್ಕೃತಿಕ ಮನರಂಜನೆಯ ಕಾರ್ಯಕ್ರಮಗಳನ್ನು ಸಂಘಟಿಸುವ ಮೂಲಕ ಅತಿ ವೈಭವದಿಂದ ಆಚರಿಸುವರ.ಇಲ್ಲಿನ ಕೆಲವು ಗಣೇಶ ವಿಗ್ರಹಗಳು ಐದು ದಿನ,ಒಂಬತ್ತು ದಿನ.ಹನ್ನೊಂದು ದಿನ.ಅಷ್ಟಮಿ ಗಣಪ.ವರ್ಷದವರೆಗಿನ ಗಣಪ ಹೀಗೆ ವಿವಿಧ ಹಂತಗಳಲ್ಲಿ ಸಾರ್ವಜನಿಕ ಗಣೇಶ ವಿಗ್ರಹದಿಂದ ಹಿಡಿದು ಮನೆಮನೆಗಳಲ್ಲಿ ಗಣೇಶ ಮೂರ್ತಿ ಪ್ರತಿಷ್ಠಾಪನೆ ಮಾಡುವ ಮೂಲಕ ಗಣೇಶೋತ್ಸವ ನಡೆಸುವರು.

ಸಾರ್ವಜನಿಕ ಸ್ಥಳಗಳಲ್ಲಿ ಪ್ರತಿಷ್ಠಾಪಿಸುವ ಗಣೇಶ ಮೂರ್ತಿಗಳೆಂದರೆ ಅಗಸಿ ಗಣಪ.ರಾವಳ ಓಣಿ ಗಣಪ,ಪೇಟೆ ಓಣಿಯ ಗಣಪ,ಚಂದ್ರಶೇಖರ ಮಠ,ಲಂಬೂನವರ ಓಣಿ,ಮುಚ್ಚಂಡಿಯವರ ಓಣಿ.ಶಂಕರಲಿಂಗ ಗುಡಿ ಓಣಿ,ಜಾಡಗೇರಿ ಓಣಿ,ಕರೆವ್ವನ ದೇವಾಲಯ,ಪಂಚಲಿಂಗೇಶ್ವರ ಕ್ರಾಸ್,ಬಸ್ ನಿಲ್ದಾಣದ ಎದುರಿಗೆ,ಮೇದಾರ ಓಣಿ,ಗಾಂಧಿನಗರ,ನಿರ್ಮಲ ನಗರ,ಬಸವೇಶ್ವರ ನಗರ,ಮಾರುತಿ ದೇವಸ್ಥಾನ(ಗೌಟನ) ಎ.ಪಿ.ಎಂ.ಸಿ ಮಾರ್ಕೆಟ್ ಹೀಗೆ ಸಾರ್ವಜನಿಕ ಸ್ಥಳಗಳಲ್ಲಿ ಗಣೇಶ ಮೂರ್ತಿ ಇಟ್ಟು ದಿನವೂ ವಿಶೇಷ ಪೂಜೆ,ಕಾರ್ಯಕ್ರಮಗಳನ್ನು ಜರುಗಿಸುವರು.

ಶ್ರೀಶೈಲಸ್ವಾಮಿ ಸಂಬಾಳಮಠ.ಹಿರೇಮಠ ಚನ್ನಯ್ಯನವರ ಮನೆ ಗಂಗಪ್ಪ ಪತ್ತಾರ ಇವರ ಮನೆಗಳಲ್ಲಿ ಮಹಾನವಮಿಯ ದಸರಾವರೆಗೂ ಗಣೇಶ ವಿಗ್ರಹ ಪ್ರತಿಷ್ಠಾಪಿಸಿದರೆ ಷಣ್ಮುಖ ಪೂಜೇರ(ಪಶುಪತಿ) ಇವರ ಮನೆಯಲ್ಲಿ ಖಾಯಂ ಗಣಪತಿ ವಿಗ್ರಹ ಇಡುವ ಸಂಪ್ರದಾಯ ತಲತಲಾಮತರದಿಂದ ಬಂದಿದೆ.ಅಂದರೆ ಇವರ ಮನೆಯ ಗಣೇಶ ವಿಗ್ರಹಕ್ಕೆ ವರ್ಷಕ್ಕೊಮ್ಮೆ ಬಣ್ಣ ಹಚ್ಚುವ ಮೂಲಕ ಮತ್ತೊಂದು ವರ್ಷ ಗಣೇಶ ಚತುರ್ಥಿ ಬರುವವರೆಗೂ ದಿನವೂ ಪೂಜಿಸುತ್ತ ಬಂದು ಗಣೇಶ ಚತುರ್ಥಿ ಬರುವ ಮೊದಲು ಬಣ್ಣ ಮಾತ್ರ ಹೊಸದಾಗಿ ಹಚ್ಚಿಸಿ ಮತ್ತೆ ಅದನ್ನೇ ಪ್ರತಿಷ್ಠಾಪಿಸಿ ಪೂಜಾ ವಿಧಿವಿದಾನಗಳನ್ನು ನಡೆಸುತ್ತ ಹೋಗುವರು.[31]

**5.4. ಪಂಚಲಿಂಗೇಶ್ವರ ದೇವಾಲಯದ ಆಚರಣೆಗಳು**

ಪ್ರತಿ ಸೋಮವಾರ ಪಂಚಲಿಂಗೇಶ್ವರನ ವಾರವೆಂದು ಮುನವಳ್ಳಿಯ ಜನತೆ ಆಚರಿಸುತ್ತ ಬಂದಿದ್ದು,ಆ ದಿನ ವಿಶೇಷ ಪೂಜೆ,ಸಂಜೆ ಹೊತ್ತು ಪಲ್ಲಕ್ಕಿ ಉತ್ಸವ ಜರುಗುವುದು,.ಪ್ರತಿವರ್ಷ ಯುಗಾದಿ ಪಾಡ್ಯದಂದು ಸೂರ್ಯ ಕಿರಣಗಳು ಪಂಚಲಿಂಗೇಶ್ವರನ ಪಂಚಲಿಂಗಗಳ ಮೇಲೆ ನೇರವಾಗಿ

---

30. ಸಂದರ್ಶನ, ಶ್ರೀಶೈಲಸ್ವಾಮಿ ಸಂಬಾಳಮಠ, ದಿನಾಂಕ 4-3-2013, ವಯಸ್ಸು- 75
31. ವೈ. ಬಿ. ಕಡಕೋಳ, ಇನ್ನೂರು ಶಿವಾನುಭವಗಳು' ಸ್ಮರಣ ಸಂಚಿಕೆ, 2000, ಪುಟ – 10

ಸ್ಪರ್ಶಿಸುವವು ಈ ದಿನ ಕೂಡ ಇಲ್ಲಿ ವಿಶೇಷ ಪೂಜಾ ಕಾರ್ಯಗಳು ಜರುಗುತ್ತವೆ.ಪ್ರತಿ ಅಮವಾಸೆಯಂದು ವಿಶೇಷ ಪೂಜೆ ಮುಗಿದ ನಂತರ ಅನ್ನಪ್ರಸಾದ ಜರುಗುತ್ತಿದ್ದು.ಶ್ರಾವಣ ಮಾಸದಲ್ಲಂತೂ ಇಲ್ಲಿನ ಸಡಗರ ಸಂಭ್ರಮ ಹೇಳತೀರದ್ದು.ನಿತ್ಯ ಪೂಜೆ.ಜೊತೆಗೆ ಮೂರನೇ ಸೋಮವಾರ,ನಾಲ್ಕನೇ ಸೋಮವಾರದವರೆಗೆ 7 ದಿನಗಳ ಸಪ್ತಾಹ ಹಾಗೂ ನಿತ್ಯವೂ ಅನ್ನದಾಸೋಹ ಕಾರ್ಯ ಜರುಗುವುದು.

ಮಹಾ ಶಿವರಾತ್ರಿಗೆ ಐದು ದಿನಗಳ ಜಾಗರಣೆ,ಅಮವಾಸೆ ದಿನ ರಥೋತ್ಸವ,ನಂತರದ ಐದು ದಿನಗಳು ಕೂಡ ಕುಸ್ತಿ ಸ್ಪರ್ಧೆ,ಚಕ್ಕಡಿ ಓಡಿಸುವ ಶರ್ಯತ್ತು, ನಾಟಕ ಪ್ರದರ್ಶನ ಕಾಲೇಜು ವಿದ್ಯಾರ್ಥಿಗಳಿಗಾಗಿ ಚರ್ಚಾ ಸ್ಪರ್ಧೆ, ಸರ್ವಧರ್ಮ ಸಾಮೂಹಿಕ ವಿವಾಹ ಮೊದಲಾದ ಕಾರ್ಯಕ್ರಮಗಳು ಶಿವರಾತ್ರಿ ಸಂದರ್ಭ ಜರುಗುತ್ತವೆ,ಶಿವರಾತ್ರಿ ಸಂದರ್ಭ ಜರುಗುವ ಕಾರ್ಯಕ್ರಮಗಳು ವಿಶಿಷ್ಟತೆಯಿಂದ ಕೂಡಿದ್ದು ಪ್ರತಿ ವರ್ಷವೂ ವಿಭಿನ್ನ ಕಾರ್ಯಕ್ರಮಗಳನ್ನು ಸಂಘಟಿಸುವ ಮೂಲಕ ಜಾತ್ರಾ ಉತ್ಸವ ಕಮೀಟಿಯವರು ಶ್ರಮಿಸುತ್ತಿರುವರು.

ಅಮದ ಹಾಗೆ ಪಂಚಲಿಂಗೇಶ್ವರ ರಥವು ಕಟ್ಟಿಗೆಯಿಂದ ರಚನೆಗೊಂಡಿದ್ದು ಜಾತ್ರೆಯ ದಿನ ಅಲಂಕೃತಗೊಂಡ ರಥೋತ್ಸವ ಜರುಗುವ ಮುಂಚೆ ವ್ಯಾಸನ ತೋಳು(ನಂದಿಕೋಲು)ಗಳ ಆಗಮನ ಇವು ಬಣಗಾರ ಓಣಿ ಮಲ್ಲೇಶಪ್ಪ ಮೂಲಿಮನಿ ಮತ್ತು ಜಾಡಗೇರಿ ಓಣಿ ವಿರುಪಾಕ್ಷಪ್ಪ ಬಾಜಪ್ಪಗೋಳ ಇವರ ಮನೆಯಲ್ಲಿನ ನಂದಿಕೋಲು ಪೂಜೆಗೊಂಡು ಎರಡು ಸೇರಿ ಗ್ರಾಮದ ಪ್ರಮುಖ ಬೀದಿಗಳಲ್ಲಿ ಮೆರವಣಿಗೆಯೊಂದಿಗೆ ಸಂಚರಿಸುತ್ತ ನಂತರ ಪಂಚಲಿಂಗೇಶ್ವರ ಪಾಲಕಿ ಉತ್ಸವದಲ್ಲಿ ಅಲಂಕೃತ ಮೂರ್ತಿಯೊಂದಿಗೆ ರಥದತ್ತ ಆಗಮಿಸುವರು.ಅಲಂಕೃತ ಮೂರ್ತಿಯನ್ನು ರಥದಲ್ಲಿ ಪ್ರತಿಷ್ಠಾಪಿಸಿ ಹರಹರ ಮಹಾದೇವ ಎನ್ನುತ್ತ ರಥವನ್ನು ಎಳೆಯುತ್ತ ಸಾಗುವರು. ಇದು ಬ್ರಿಟಿಷ ಕಾಲದಿಂದಲೂ ಜರುಗುತ್ತ ಬಂದಿರುವ ಸಂಪ್ರದಾಯ ದೇವಸ್ಥಾನದ ಆವರಣದಿಂದ ಹೊರಟ ರಥವು ಕೈವಲ್ಯಾಶ್ರಮ ಸ್ವಾಮಿ ಮಠ ನಂತರ ಕುಸ್ತಿಕಣ ದಾಟಿ ತಿರುವಿನ ಸ್ಥಳದವರೆಗೂ ಬರುವುದು ಈ ಸಂದರ್ಭ ನೆರೆದಿದ್ದ ಜನರು ಬಾಳೆಹಣ್ಣು.ಉತ್ತತ್ತಿ.ಕಾಯಿಗಳನ್ನು ರಥದ ಕಳಸಕ್ಕೆ ಎಸೆಯುವರು.ಹೀಗೆ ಪಂಚಲಿಂಗೇಶ್ವರ ದೇವಾಲಯದ ರಥೋತ್ಸವ ಅತೀ ವಿಜೃಂಬಣೆಯಿಂದ ಜರುಗುತ್ತಿರುವುದು.[32]

**5.5. ಸಾಯಿ ಮಂದಿರದ ಉತ್ಸವಗಳು**

ಗೋಕುಲಾಷ್ಟಮಿಯಂದು ಮಕ್ಕಳಿಗಾಗಿ ವೇಷಭೂಷಣ ಸ್ಪರ್ಧೆ,ತೊಟ್ಟಿಲು ಕಾರ್ಯಕ್ರಮ.ಭಜನೆ ಜರುಗುವುದು.ಗುರುಪೂರ್ಣಿಮೆಯ ದಿನದಂದು ಸತ್ಯನಾರಾಯಣ ಪೂಜೆ.ಮಹಾಪ್ರಸಾದ ಶಿವರಾತ್ರಿಯಂದು ಜಾಗರಣೆ,ಬಿಲ್ವಾರ್ಚನೆ,ಕಾರ್ತಿಕ ಮಾಸದಲ್ಲಿ ಕಾರ್ತಿಕೋತ್ಸವ,ವಿಜಯದಶಮಿ ಸಂದರ್ಭದಲ್ಲಿ ಅನ್ನಯ್ಯಸ್ವಾಮಿ ಘಟವಾಳಿಮಠ ಇವರು ದೇವಿ ಪುರಾಣ ಪಾರಾಯಣ ಮಾಡುವರು..

---

32. ವೈ. ಬಿ. ಕಡಕೋಳ, ಸಂಯುಕ್ತ ಕರ್ನಾಟಕ ದಿನಪತ್ರಿಕೆ, 24–4–2013, ಪುಟ – 3

ಪ್ರತಿ ಗುರುವಾರ ಸಂಜೆ ಏಳು ಗಂಟೆಗೆ ಬಾಳು.ಹೊಸಮನಿಯವರು ಸಚ್ಚರಿತ್ರೆ ಪಾರಾಯಣವನ್ನು ನಿರಂತರವಾಗಿ ಜರುಗಿಸಿಕೊಂಡು ಬರುತ್ತಿದ್ದು.ಆ ದಿನ ಈರಪ್ಪ.ಆಲೂರ ಎಂಬ ಸದ್ಭಕ್ತರು ಕಳೆದ ಏಳು ವರ್ಷಗಳಿಂದಲೂ ಭಕ್ತ ಜನರಿಗೆ ಅಂಬಲಿ ನೀಡುವ ಮೂಲಕ ತಮ್ಮ ಸೇವೆಗೈಯುತ್ತಿರುವರು. ಜೊತೆಗೆ ಅಂದು ಭಕ್ತರು ಮಹಾಪ್ರಸಾದ ನೀಡುವ ಪರಂಪರೆ ಬೆಳೆಸಿಕೊಂಡು ಬಂದಿರುವರು.ಇತ್ತೀಚಿನ ವರ್ಷಗಳಲ್ಲಿ ದೇವಾಲಯ ಆವರಣದಲ್ಲಿ ಗಿಡಮರಗಳನ್ನು ನೆಟ್ಟು ಅವುಗಳ ಪೋಷಣೆ ಜೊತೆಗೆ ಇಲ್ಲಿ ಪ್ರಸಾದ ನಿಲಯ ನಿರ್ಮಾಣಗೊಂಡಿದ್ದು.ದೇವಾಲಯವನ್ನು ಕೂಡ ಇನ್ನೂ ವಿಶಿಷ್ಟ ರೀತಿಯಲ್ಲಿ ಪುನರ ನಿರ್ಮಾಣಗೊಳಿಸುವ ನಿಟ್ಟಿನಲ್ಲಿ ಪ್ರಯತ್ನಕ್ಕೆ ಕೈಹಾಕಿದ್ದು ಒಂದೂವರೆ ಕೋಟಿ ರೂಪಾಯಿಗಳ ವೆಚ್ಚದಲ್ಲಿ ಮಂದಿರ ನಿರ್ಮಾಣ ಕಾರ್ಯಕ್ಕೆ ಚಾಲನೆ ನೀಡಲಾಗಿದ್ದು ಸಾಯಿಬಾಬಾ ಭಕ್ತರು ಈ ಕಾರ್ಯದಲ್ಲಿ ಕೈಜೋಡಿಸುತ್ತಿದ್ದು ಕಾಮಗಾರಿಗೆ ಆರಂಭ ನೀಡಲಾಗಿದೆ.

ಪ್ರತಿವರ್ಷವೂ ಜರುಗುವ ಉತ್ಸವ ಸಂದರ್ಭದಲ್ಲಿ ಇಂದ್ರಪ್ರಸ್ಥ ರಾಜವೈಭವದ ರಥದಲ್ಲಿ ಶ್ರೀ ಸಿರಡಿ ಬಾಬಾರ ಭಾವಚಿತ್ರದ ಭವ್ಯ ಮೆರವಣಿಗೆಯೊಂದಿಗೆ ಕಾರ್ಯಕ್ರಮಕ್ಕೆ ಚಾಲನೆ ನೀಡುವರು.ಇದರಲ್ಲಿ ವಿಶೇಷವಾಗಿ ಸಿರಬಡಗಿಯ ಭಜನಾ ಮೇಳ,ನಂದಿಯೊಂದಿಗೆ ಹಾಗೂ ಜಗ್ಗಲಿಗೆ ಮೇಳ.ಡೊಳ್ಳಿನ ಮೇಳ,ಆರತಿ ಕುಂಭಗಳ ಹೊತ್ತ ಸುಮಂಗಲೆಯರು,ಚಿಪ್ಪಲಕಟ್ಟಿಯ ಗಜರಾಜನೊಂದಿಗೆ ಮುನವಳ್ಳಿ ಗ್ರಾಮದಲ್ಲಿ ಭವ್ಯ ಮೆರವಣಿಗೆ ಸಾಗಿ ಬೆಟ್ಟದ ಮೇಲಿರುವ ಮಂದಿರ ತಲುಪುವುದು ಮುನಿಗಳ ಹಳ್ಳಿಯ ಜನ ಸದಾ ದೈವ ಭಕ್ತರು ಎಂಬುದಕ್ಕೆ ಇತಿಹಾಸ ಕಾಲದಿಂದಲೂ ಅನೇಕ ಉದಾಹರಣೆಗಳು ದೊರೆಯುವ ಜೊತೆಗೆ ಇಲ್ಲಿನ ದೇವಾಲಯಗಳು ಮಠಮಾನ್ಯಗಳು ಕೂಡ ಸಾಕ್ಷಿಯಾಗಿವೆ ಇಂಥವುಗಳಲ್ಲಿ ಆಧುನಿಕ ಯುಗದ ಶಿರಡಿ ಸಾಯಿಬಾಬಾ ಮಂದಿರವು ಸೇರ್ಪಡೆಯಾಗಿದ್ದು ಇಲ್ಲಿ ಪ್ರತಿದಿನ ಬೆಳಿಗ್ಗೆ ಕಾಕಡಾರತಿ 12.15 ಕ್ಕೆ ಮದ್ಯಾಹ್ನ ಆರುತಿ ಕಾರ್ಯಕ್ರಮ.ಸಾಯಂಕಾಲ 6.30 ಕ್ಕೆ ಆರುತಿ ರಾತ್ರಿ 10 ಕ್ಕೆ ಶೇಜಾರುತಿ ಕಾರ್ಯವು ನಿತ್ಯ ಪೂಜಾ ಕಾರ್ಯದ ಜೊತೆಗೆ ನಾಲ್ಕು ಹೊತು ಜರುಗಿಸುತ್ತಿದ್ದು ಇದಕ್ಕಾಗಿ ಅರ್ಚಕರನ್ನು ನೇಮಕ ಮಾಡಿಕೊಂಡಿರುವರು.[33]

## 5.6 ದೇವರ ಮೂರ್ತಿಗೆ ಬುತ್ತಿ ಪೂಜೆಯ ಅಲಂಕಾರ

ಭಾರತೀಯ ಪರಂಪರೆಯಲ್ಲಿ ದೈವೀ ಆರಾಧನೆ ವಿಶಿಷ್ಟ ಹಾಗೂ ಸಾಂಪ್ರದಾಯಕವಾದದ್ದು, ಯಜ್ಞ-ಯಾಗಾದಿಗಳು.ಹೋಮ-ಹವನಗಳ ಮೂಲಕ ದೇವರ ಆರಾಧನೆ.ನಿತ್ಯ ಪೂಜೆಯ ಶುದ್ದ ಕಾಯಕ ನಿಷ್ಠೆಯಲ್ಲಿ ಪೂಜಾ ಕಾರ್ಯಗಳು ನಡೆದು ಬಂದಿವೆ.ಇಂಥ ಪೂಜೆಗಳಲ್ಲಿ ಬಿಲ್ವಾರ್ಚನೆ, ಕುಂಕುಮಾರ್ಚನೆ, ಅಭಿಷೇಕ, ಕ್ಷೀರಾಭಿಷೇಕ, ಎಲೆಪೂಜೆ, ಅಮೃತ ಅಭಿಷೇಕ, ಅಲಂಕಾರಿಕ ಪೂಜೆ, ಬುತ್ತಿ ಪೂಜೆ ಹೀಗೆ ಹತ್ತಾರು ವಿಧಗಳಲ್ಲಿ ನಿತ್ಯವೂ ನಮ್ಮ ದೇವಾಲಯಗಳಲ್ಲಿ ಪೂಜೆ ಕಾರ್ಯಗಳು ನಿತ್ಯ ನಿರಂತರವಾಗಿ ನಡೆದುಕೊಂಡು ಬಂದಿವೆ.

---

33. ವೈ. ಬಿ. ಕಡಕೋಳ, ಪ್ರಜಾವಾಣಿ, ಕರ್ನಾಟಕದ ದರ್ಶನ ಪುರವಣಿ, 21-7-2012, ಪುಟ - 2

ಇಂಥ ಪೂಜೆಗಳಲ್ಲಿ ಶ್ರಾವಣ ಮಾಸ, ಕಾರ್ತಿಕ ಮಾಸ,ಶಿವರಾತ್ರಿಯಂಥ ಸಂಧರ್ಭಗಳಲ್ಲಿ ಗ್ರಾಮೀಣ ಪ್ರದೇಶಗಳಲ್ಲಿ ಬುತ್ತೀ ಪೂಜೆ ಎಂಬ ಪೂಜಾ ವಿಧಾನ ಇಂದಿಗೂ ರೂಡಿಯಲ್ಲಿದೆ. ಇಂಥ ಪೂಜೆಗೆ ಪ್ರಸಿಧ್ಧರಾದವರು ನಮ್ಮೂರಿನಲ್ಲುಂಟು. ಅವರೇ ಬೆಳಗಾವಿ ಜಿಲ್ಲೆಯ ಸವದತ್ತಿ ತಾಲೂಕಿನ ಮುನವಳ್ಳಿಯ ಶ್ರೀಶೈಲಸ್ವಾಮಿ.ಸಂಭಾಳಮಠ.

ರಾಚಯ್ಯಸ್ವಾಮಿ–ಪಾರ್ವತೆವ್ವರ ಮಗನಾದ ಶ್ರೀಶೈಲಸ್ವಾಮಿ ಓದಿದ್ದು ಕೇವಲ ಎರಡನೆಯ ತರಗತಿಯಾದರೂ ಬಾಲ್ಯದಿಂದಲೂ ಕಿತ್ತು ತಿನ್ನುವ ಬಡತನದಲ್ಲಿ ತಂದೆಯೊಡನೆ ಕಲಾಕುಸುರಿ ಕೆಲಸದಲ್ಲಿ ಸಹಾಯ ಮಾಡುತ್ತ ಆ ಕಲಾಕುಸುರಿಯಲ್ಲಿ ತನಗೆ ತಾನೇ ಕಲಾಲೋಕದಲ್ಲಿ ನಿಲ್ಲುವಂತಾದದ್ದು ಜೀವನದ ಮಹತ್ವದ ತಿರುವು. ಸುಮಾರು 65 ವರ್ಷಕ್ಕಿಂತ ಹೆಚ್ಚಿನ ವಯೋವೃದ್ದರಾದ ಇವರು ಪ್ರತಿ ವರ್ಷವೂ ಮಣ್ಣೆತ್ತಿನ ಅಮವಾಸೆ ವೇಳೆಗೆ ಗಣೇಶ ಮೂರ್ತಿ ತಯಾರಿಕೆಯಲ್ಲಿ ತಲ್ಲೀನರಾಗುತ್ತಾರೆ,

ಸಾರ್ವಜನಿಕ ಗಣೇಶ ಮೂರ್ತಿಯಿಂದ ಹಿಡಿದು ಮನೆ–ಮನೆಗಳಲ್ಲಿ ಬೇಕಾಗುವ ಗಣೇಶ ಮೂರ್ತಿಗಳವರೆಗೂ ಇವರ ಕಲಾ ನೈಪುಣ್ಯತೆಯಲ್ಲಿ ಗಣೇಶ ವಿಗ್ರಹಗಳು ರಾರಾಜಿಸುತ್ತವೆ. ಗೌರಿ ಹಬ್ಬದ ವೇಳೆಗೆ ಗೌರಿ ಮೂರ್ತಿ,ಹೋಳಿ ಹಬ್ಬಕ್ಕೆ ರತಿ–ಮನ್ಮಥ. ಮೋಹರಂ ಕಾಲಕ್ಕೆ ಹೆಜ್ಜೆ ಮೇಳದವರಿಗೆ ಹೂ–ಗುಚ್ಚಗಳು.ಮದುವೆ ಸಮಾರಂಭಕ್ಕೆ ಬಾಸಿಂಗಗಳು ಹೀಗೆ ಎಲ್ಲ ವಿದದ ವೈವಿದ್ಯತೆಗಳಲ್ಲಿ ಸಾಂಪ್ರದಾಯಕ ಅಂದಚೆಂದಕ್ಕೆ ಬೇಕಾದ ಕಾರ್ಯಕ್ಕೆ ಇವರು ಎತ್ತಿದ ಕೈ.ವಿಶೇಷವಾಗಿ ಈ ಶ್ರಾವಣ ಮಾಸದಲ್ಲಿ ದೇವಾಲಯಗಳಲ್ಲಿ ಇವರು ಕಟ್ಟುವ ಬುತ್ತಿ ಪೂಜೆ ನಿಜಕ್ಕೂ ಅಚ್ಚರಿಯನ್ನುಂಟು ಮಾಡುತ್ತದೆ.

ಬುತ್ತಿ ಪೂಜೆಗೆ ಇವರು ರಾತ್ರಿಯಿಡೀ ತಮ್ಮ ಮಗನೊಂದಿಗೆ ನಿದ್ರೆಗೆಟ್ಟು ಕಾಯಕಗೈಯ್ಯುವ ರೀತಿ ವೈಶಿಷ್ಟ್ಯಪೂರ್ಣವಾಗಿದೆ.ಬೆಳಗಿನ ಜಾವ ಮಡಿಯಿಂದ ಅಕ್ಕಿಯನ್ನು ಚನ್ನಾಗಿ ಕುದಿಸಿ ಅನ್ನ ಮಾಡಿಕೊಂಡು ದೇವರಿಗೆ ಮೊದಲು ಪೂಜೆ ಸಲ್ಲಿಸಿ ನಂತರ ಶುಭ್ರವಾದ ಬಿಳಿಯ ವಸ್ತ್ರ ಅಥವ ದೋತರದ ಬಟ್ಟೆ ಬಳಸಿ ಅದರಲ್ಲಿ ಆ ಅನ್ನವನ್ನು ಹಾಕಿ,ಅದರಲ್ಲಿ ಮೊಸರು ಬಳಸಿಕೊಂಡು ಬೇಕಾಗುವ ರೀತಿಯಲ್ಲಿ ಹದ ಮಾಡಿಕೊಳ್ಳುವರು. ವಸ್ತ್ರದಲ್ಲಿ ಅನ್ನ ಮೊಸರು ಹಾಕಿ ತಮ್ಮ ಮಗನೊಂದಿಗೆ ಸಹಾಯಕನನ್ನು ಕರೆದುಕೊಂಡು ಅದನ್ನು ಮಿಜ್ಜಿಸುವರು. ಅದು ಮೂರ್ತಿ ಪೂಜೆಗೆ ಅನುಕೂಲವಾದಂತಾದಾಗ ತೆಗೆದಿರಿಸಿಕೊಂಡು ಬುತ್ತಿ ಪೂಜೆ ಕಟ್ಟುವ ಕಾರ್ಯದಲ್ಲಿ ನಿರತರಾಗುವ ರೀತಿ ಸೋಜಿಗ.

ಭಕ್ತಿ ಮತ್ತು ನಿಷ್ಠೆಯಿಂದ ಬೆಳಗಾಗುವ ಹೊತ್ತಿಗೆ ಆ ಮೂರ್ತಿಗೆ ವಿಶಿಷ್ಟ ರೂಪ ನೀಡಿ ತಮ್ಮೊಂದಿಗೆ ತಂದಿದ್ದ ವಿವಿಧ ಬಣ್ಣದ ಪೇಪರ್ ಕಟಿಂಗ್ಸ ಗಳನ್ನು ದೇವರ ಮೂರ್ತಿಗೆ ಅಂಟಿಸುವ ಮೂಲಕ ಆ ಮೂರ್ತಿಗೆ ಹೊಸ ರೂಪ ನೀಡುವರು. ದೇಹ ಮುಪ್ಪಾದರೂ ಈ ಕಾಯಕಕ್ಕೆ ಮುಪ್ಪಾಗಿಲ್ಲ ಎನ್ನುವಂತೆ ಅರ್ಚನೆಯ ಜೊತೆಗೆ ಮಂಗಳಾರುತಿ ಮಾಡಿ ಎಲ್ಲರಿಗೂ ನೈವೇದ್ಯ ನೀಡುವ ಕಾರ್ಯಕ್ಷಮತೆ ಅಭಿನಂದನಾರ್ಹ. ಇವರು ಮುನವಳ್ಳಿ ಅಷ್ಟೇ ಅಲ್ಲ ಸುತ್ತಮುತ್ತಲಿನ ಗ್ರಾಮಗಳಲ್ಲಿ ಅಲ್ಲಿನ ಜನರ ಅಪೇಕ್ಷೆಯಂತೆ ಬುತ್ತಿ ಪೂಜೆ ಮಾಡಿಕೊಡುವರು.

ಬುತ್ತಿ ಪೂಜೆ ಕಾರ್ಯ ನಿಜಕ್ಕೂ ಕಠಿಣವಾದುದು.ಇದಕ್ಕೆ ಮೆದುವಾಗಿ ಅನ್ನವಾಗುವ ಅಕ್ಕಿ ಅವಶ್ಯಕ. ಜೊತೆಗೆ ಅದನ್ನು ಕುದಿಸಿ ಪೂರ್ಣ ಪ್ರಮಾಣದಲ್ಲಿ ಉಜ್ಜಿ ಮೆದುವಾಗಿಸುವಲ್ಲಿ ಕೂಡ ಕೈಚಳಕವುಂಟು. ಸ್ವಲ್ಪ ಹದ ತಪ್ಪಿದರೆ ಸಾಕು ಪೂಜೆ ಕಾರ್ಯಕ್ಕೆ ಅಡೆತಡೆಯಾದಂತೆ. ಹೀಗಾಗಿ ಬಹಳ ಎಚ್ಚರಿಕೆಯಿಂದ ಈ ಕಾರ್ಯ ಮಾಡುತ್ತೇವೆ ಎನ್ನುತ್ತಾರೆ. ನಿಜಕ್ಕೂ ಇಂಥ ಶೃದ್ಧಾಬಾವದ ಬದುಕು ಸಾಗಿಸುತ್ತಿರುವ ಸಂಭಾಳಮಠರ ಬದುಕು ಆದರ್ಶಪ್ರಾಯವಾದುದು. [34]

**5.7 ಬುಡುಬುಡುಕೆಯವರು(ಸುಡುಗಾಡ ಸಿದ್ದರು)**

ಮುನವಳ್ಳಿಯ ಪಂಚಲಿಂಗೇಶ್ವರ ದೇವಾಲಯ ಹತ್ತಿರ ಬೆಟ್ಟದ ಮೇಲೆ ಸುಡುಗಾಡ ಸಿದ್ದರು ಅಥವ ಬುಡುಬುಡುಕೆಯವರ ಜನಾಂಗದ ವಾಸವಿದೆ. ತಮ್ಮದೇ ಆದ ಒಂದು ಓಣಿಯನ್ನು ಇವರು ಹೊಂದಿರುವರು. ಜನಪದರ ಬದುಕಿನಲ್ಲಿ ಬುಡುಬುಡುಕೆಯವರ ಪಂಗಡಗಳು ತೀರಾ ವಿರಳ, ಇವರು ರಾತ್ರಿ ಅಮವಾಸೆ ವೇಳೆ ಸ್ಮಶಾನದಲ್ಲಿ ಕುಳಿತು ಹಕ್ಕಿಗಳ ಕೂಗುವ ದ್ವನಿಯ ಮೂಲಕ ಭವಿಷ್ಯವನ್ನು ಗ್ರಹಿಸುವ ಮೂಲಕ ಜನರ ಬಳಿಗೆ ಬಂದು ಅದನ್ನು ನುಡಿಯುತ್ತಿದ್ದರು.

ಉದ್ದನೆಯ ನಿಲುವಂಗಿ,ತಲೆಗೆ ಸುರುಳಿಯಾಕಾರದ ಪಟಗಾ ಧರಿಸುವ ಇವರು ಕೊರಳಲ್ಲಿ ರುದ್ರಾಕ್ಷಿ ಸರ ಹಣೆಯ ಮೇಲೆ ವಿಭೂತಿ ನವಿಲುಗರಿ,ಮುತ್ತಿನ ಸರ ಧರಿಸುವ ಜೊತೆಗೆ ನಿಲುವಂಗಿಯಲ್ಲಿ ಉದ್ದನೆಯ ಜೇಬು ಇರುವಂತೆ ಜೋಳಿಗೆ ಹೊಂದಿರುತ್ತಾರೆ, ಕೈಯಲ್ಲಿ ವಿವಿಧ ಬಗೆಯ ಉಂಗುರಗಳನ್ನು ಇರಿಸಿಕೊಂಡಿರುವ ಇವರು ಕೈಯಲ್ಲಿ ಕೋಲು ಹಿಡಿದುಕೊಂಡು ಬಾಗಿಲಿಗೆ ಬಂದು ಡಮಕಿನಾಕಾರದ ಬುಡುಬುಡುಕೆ ವಾದ್ಯವನ್ನು ಬಾರಿಸುವ ಮೂಲಕ ಭವಿಷ್ಯವಾಣಿ ನುಡಿಯುತ್ತಾರೆ.

ಗ್ರಾಮೀಣ ಭಾಗದಲ್ಲಿ ಇಂದಿಗೂ ಬುಡುಬುಡುಕೆಯವರ ಬಾಯಿಂದ ಬರುವ ವಾಣಿ ಬಗ್ಗೆ ಅಪಾರ ನಂಬಿಕೆ ಇದೆ.ಆದರೆ ಈ ವೃತ್ತಿಯನ್ನು ಅವಲಂಬಿಸಿದ ಕುಟುಂಬಗಳು ದಿನದಿನಕ್ಕೆ ಕಡಿಮೆಯಾಗುತ್ತ ತಮ್ಮ ಕುಲಕಸುಬನ್ನು ಬಿಟ್ಟು ಬದುಕಿಗಾಗಿ ಬೇರೆ ವೃತ್ತಿ ಅವಲಂಬಿಸುತ್ತಿರುವ ಕಾರಣ ಬುಡುಬುಡುಕೆಯವರು ಎಂದರೆ ಜನಪದ ಸಂಗ್ರಹದಲ್ಲಿ ಚಿತ್ರಗಳಲ್ಲಿ ಮಾತ್ರ ಕಾಣುವ ದಿನಗಳು ಮುಂದೊಂದು ದಿನ ಬಂದರೆ ಅಚ್ಚರಿಯೇನಲ್ಲ.[35]

**5.8 ಮಹಾನವಮಿ**

ದುಷ್ಟಶಕ್ತಿಗಳನ್ನು ಸಂಹರಿಸಿ,ಸಜ್ಜನರನ್ನು ಉದ್ದರಿಸುವ ಉದಾತ್ತ ತತ್ವ ಪ್ರತಿಪಾದಿಸುವ ಹಬ್ಬ ಮಹಾನವಮಿ,ಇದಕ್ಕೆ ಬನ್ನಿ ಹಬ್ಬ,ವಿಜಯದಶಮಿ,ನವರಾತ್ರಿ,ನಾಡ ಹಬ್ಬ ಎಂದೆಲ್ಲ ಕರೆಯುವರು.ಮುಂಗಾರು ಮೋಡಗಳೆಲ್ಲ ಮಾಯವಾಗಿ ತುಂತುರು ಹನಿ ಬೀಳುವಾಗ ಭೂಮಿತಾಯಿ ಹಚ್ಚ ಹಸಿರಾಗಿರುವಾಗ ಮಹಾನವಮಿ ಬರುತ್ತದೆ. ರೈತರಿಗೆ ಸ್ವಲ್ಪ ಬಿಡುವು ಕೂಡ ಇರುತ್ತದೆ.ಘಟಸ್ಥಾಪನೆಯೊಂದಿಗೆ ಪ್ರಾರಂಭವಾಗುವ ಈ ಹಬ್ಬ.ಈ ಸಂದರ್ಭದಲ್ಲಿ ಶಕ್ತಿದೇವತೆಯ

---

34. ಶ್ರೀ ಹೆ. ಬ. ಅಸೂಟಿ, ನಿವೃತ್ತ ಶಿಕ್ಷಕರು, ಸಂದರ್ಶನ, 5-2-2013,
35. ಮಾಹಿತಿ ಶ್ರೀಶೈಲಸ್ವಾಮಿ ಸಂಬಾಳಮಠ, ದಿನಾಂಕ 4-3-2013, ವಯಸ್ಸು- 75

ಉಪಾಸನೆಗಾಗಿ ನಂದಾದೀಪ ಉರಿಸುವ,ದೇವಿ ಪುರಾಣ ಪಠಿಸುವ ಅಶ್ವೀಜ ಮಾಸದ ಶುದ್ಧ ಪೌರ್ಣಿಮೆಯಿಂದ ದಶಮಿಯವರೆಗಿನ ಹತ್ತು ದಿನಗಳಲ್ಲಿ ಮೊದಲ ಒಂಬತ್ತು ದಿನಗಳನ್ನು "ನವರಾತ್ರಿ"ಎಂತಲೂ ಹತ್ತನೇ ದಿನವನ್ನು ವಿಜಯದಶಮಿ ಎಂತಲೂ ಕರೆಯುತ್ತಾರೆ.ಮುನವಳ್ಳಿಯ ನಾಡಹಬ್ಬ,ಅಂಬಾಭವಾನಿ ನಾಡಹಬ್ಬ ಇಂದು ಜರುಗುತ್ತಿರುವ ವಿಶಿಷ್ಟ ಕಾರ್ಯಕ್ರಮಗಳಲ್ಲೊಂದಾಗಿವೆ.

ಈ ಸಂದರ್ಭದಲ್ಲಿ ಮನೆ-ಮಠಗಳನ್ನೆಲ್ಲಾ ಸುಣ್ಣ-ಬಣ್ಣಗಳಿಂದ ಸಾರಿಸಿ,ಬಟ್ಟೆಬರೆ,ಹಾಸಿಗೆ ಹೊದಿಕೆಗಳನ್ನೆಲ್ಲ ಮಡಿ ಮಾಡುತ್ತಾರೆ.ಈ ಹಬ್ಬದ ಆಚರಣೆಗಾಗಿ ಘಟ್ಟ ಹಾಕಲು ಒಳ್ಳೆಣ್ಣೆ ಇಲ್ಲವೇ ತುಪ್ಪ ಅಥವಾ ಇತರ ಎಣ್ಣೆಯನ್ನು ದೀಪ ಹಚ್ಚಲು ಕುಂಬಾರ ಮನೆಯಿಂದ ಹೊಸ ದೀಪ(ಹಣತೆ) ತಂದು ಘಟಸ್ಥಾಪನೆ ತಯಾರಿ ಮಾಡಿಕೊಳ್ಳುವರು.ದೀಪವನ್ನು ನಂದದಂತೆ ಹಗಲಿರುಳು ಕಾಯ್ದುಕೊಳ್ಳುವುದು ಈ ಹಬ್ಬದ ವೈಶಿಷ್ಟ್ಯ.

ಮುನವಳ್ಳಿಯ ಕಾಳಿಕಾ ದೇವಾಲಯದಲ್ಲಿನ ಬನ್ನಿಮುಡಿಯುವ ಕಾರ್ಯಕ್ರಮವಂತೂ ಐತಿಹಾಸಿಕವಾದುದು.ಮೊದಲು ಕೋಟೆಯಲ್ಲಿನ ಅರಮನೆಯ ಮೂಲಕ ರಾಜ ಮಹಾರಾಜರು ಅಂಬಾರಿ ಆನೆಗಳ ಮೆರವಣಿಗೆಯಲ್ಲಿ ಸಾಗಿ ಬಂದು ಕಾಳಿಕಾ ಮಾತೆಯ ಸನ್ನಿಧಿಯಲ್ಲಿ ಬನ್ನಿ ಮುಡಿಯುವ ಮೂಲಕ ದಸರಾ ಆಚರಿಸುವುದನ್ನು ಸಾಂಕೇತಿಕವಾಗಿ ಇಂದಿಗೂ ಕೂಡ ಗ್ರಾಮದ ಎಲ್ಲ ದೇವಾಲಯಗಳ ಪಾಲಕಿ ಉತ್ಸವಗಳೊಂದಿಗೆ ಕಾಳಿಕಾ ದೇವಾಲಯಕ್ಕೆ ಮೆರವಣಿಗೆಯಲ್ಲಿ ಸಾಗಿಬರುವ ರೀತಿ ನಿಜಕ್ಕೂ ವರ್ಣನೀಯ. ಪಂಚಲಿಂಗೇಶ್ವರ ದೇವಾಲಯ,ಸಾಯಿಬಾಬಾ ಮಂದಿರ,ಅಂಭಾಭವಾನಿ,ನಾಗಪ್ಪನ ದೇವಾಲಯ,ವೀರಭದ್ರೇಶ್ವರ ದೇವಾಲಯ, ಉಡಚಮ್ಮ (ಕೋಟೆಯೊಳಗಿನ ದೇವಾಲಯ) ದೇವಾಲಯ,ಯಲ್ಲಮ್ಮನ ಪಾಲಕಿ,ಸೂಲಕಟ್ಟಿ ಕರೆಮ್ಮ, ಆನೆಬಂಡಿ,(ಪಂಚಲಿಂಗೇಶ್ವರ) ಆನೆಬಂಡಿ(ಗರಡಿಮನೆಯದು) ಹೀಗೆ ಒಂದರ ಜೊತೆಗೊಂದು ಪಂಚಲಿಂಗೇಶ್ವರ ದೇವಾಲಯದಿಂದ ಪ್ರಾರಂಭಿಸಿ ಆಯಾ ದೇವಾಲಯದ ಪಾಲಕಿಗಳು ಜೊತೆಗೂಡುತ್ತ ಕೋಟೆಯ ಉಡಚಮ್ಮ ದೇವಾಲಯ,ವೀರಭದ್ರ ದೇವಾಲಯದ ಮುಂದೆ ಸಾಗುತ್ತ ಮೆರವಣಿಗೆಯಲ್ಲಿ ಸೂಲಕಟ್ಟಿ ಅಗಸಿಯ ಮೂಲಕ ಕಾಳಿಕಾ ದೇವಾಲಯದತ್ತ ಸಾಗಿ ಅಲ್ಲಿ ಬನ್ನಿ ಮುಡಿಯುವ ಮೂಲಕ ತಮ್ಮ ತಮ್ಮ ದೇವಾಲಯಗಳಿಗೆ ಪಾಲಕಿ ಮರಳಿ ಒಯ್ಯುವರು. ಆದರೆ ಅಂಬಾಭವಾನಿ ಪಾಲಕಿ ಮಾತ್ರ ಪಂಚಲಿಂಗೇಶ್ವರ ದೇವಾಲಯಕ್ಕೆ ಹೋಗಿ ಅಲ್ಲಿ ಪೂಜೆ ಕಾರ್ಯ ಮಂಗಳಾರತಿ ಜರುಗುವವರೆಗೂ ನಿಂತು ನಂತರ ಅಂಭಾಭವಾನಿ ದೇವಾಲಯಕ್ಕೆ ಮರಳುವುದು. ಈ ರೀತಿ ಎಲ್ಲ ದೇವಾಲಯಗಳಲ್ಲಿನ ಪಾಲಕಿ ಉತ್ಸವದ ಮೂಲಕ ಮೆರವಣಿಗೆಯಲ್ಲಿ ಕಾಳಿಕಾ ದೇವಾಲಯಕ್ಕೆ ತೆರಳಿ ಬನ್ನಿಮುಡಿದು ಎಲ್ಲರೂ ತಮ್ಮ ತಮ್ಮ ಮನೆಗಳಿಗೆ ತೆರಳಿ ಹಿರಿಯರಿಗೆ ಬನ್ನಿ ಮುಡಿಯುವ ಜೊತೆಗೆ ಸ್ನೇಹಿತರು,ಬಂಧು-ಬಳಗದವರಿಗೆ ಬನ್ನಿ ಮುಡಿಯುವ ಸಂಪ್ರದಾಯ ಇಂದಿಗೂ ಜರುಗುತ್ತ ಬಂದಿದೆ.

ಈ ಬನ್ನಿ ಮುಡಿಯುವ ವಿಜಯದಶಮಿ ಜಾತಿಭೇದವಿಲ್ಲದೆ, ಹಿರಿ-ಕಿರಿಯರೆನ್ನದೆ ಎಲ್ಲರೂ ಒಂದಾಗುವ ಹಬ್ಬವಾಗಿ ಒಬ್ಬರಿಗೊಬ್ಬರು ಮಾತನಾಡಿಸುವ ಬಂಗಾರ ಕೊಟ್ಟು ಬಂಗಾರ ಪಡೆಯುವ

ಹಿರಿಯರಿಂದ ಆಶೀರ್ವಾದ ಪಡೆಯುವ ಮಧುರ ಬಾಂಧವ್ಯ ಬೆಳೆಸಿ ದ್ವೇಷಾಸೂಯೆಗಳನ್ನು ಹೊಡೆದೋಡಿಸುವ ಹಬ್ಬವಾಗಿದೆ

**5.9 ಸಂಕ್ರಾಂತಿ ಹಬ್ಬ**

ಸಂಕ್ರಾಂತಿ ಎಂದರೆ ಸಾಮಾನ್ಯವಾಗಿ ಜನೇವರಿ 14 ಅಥವ 15 ರಂದು ಬರುವ ಹಬ್ಬ.ಸಂಕ್ರಮತಿ ಎಂದರೆ ಉಜ್ವಲವಾದ ಬೆಳಕು, ಜೀವನದ ಹೊಸ ತಿರುವು ಎಂದರ್ಥ.ಸೂರ್ಯನು ಮಕರವೃತ್ತದಿಂದ ಕರ್ಕಾಟಕ ವೃತ್ತಕ್ಕೆ ಸ್ಥಾನಪಲ್ಲಟ ಮಾಡುವುದರಿಂದ ಈ ದಿನವನ್ನು ಮಕರ ಸಂಕ್ರಾಂತಿ ಎಂದು ಕರೆದಿರುವರು.ಈ ಹಬ್ಬದಲ್ಲಿ ಮುನವಳ್ಳಿಯ ಜನರು ಮೊದಲ ದಿನ ಎಳ್ಳು ಅರಿಸಿನ ಹಚ್ಚಿಕೊಂಡು ಸ್ನಾನ ಮಾಡಿ ದೇವರ ಪೂಜೆ ಮಾಡಿದರೆ ಮರುದಿನ ಪವಿತ್ರ ನದಿಯಾದ ಮಲಪ್ರಭೆಯಲ್ಲಿ ಸ್ನಾನ ಮಾಡುವ ಮೂಲಕ ದೇವಾಲಯಗಳಿಗೆ ತೆರಳಿ ದರ್ಶನ ಪಡೆಯುವರು. ಆ ದಿನ ಸಂಜೆ ಮಲಪ್ರಭಾ ನದಿಯಲ್ಲಿ ಬಾಳೆದಿಂಡಿನಿಂದ ತಯಾರಿಸಿದ ತೆಪ್ಪದ ತೇರು ಮೂರುಸಾವಿರ ಮಠದ ಗುರುಸಿದ್ದರಾಜಯೋಗೀಂದ್ರ ಮಹಾಸ್ವಾಮಿಗಳನ್ನು ಅದರಲ್ಲಿ ಕೂಡ್ರಿಸಿ ಈಗಿರುವ ಹಳೆಯ ಸೇತುವೆಯ ಕೆಳಗಿನ ಬದಿಯಿಂದ ವಿಠೋಭಾ ಮಂದಿರದ ಹತ್ತಿರವಿರುವ ನದಿಯಲ್ಲಿನ ದೇವಾಲಯದವರೆಗೂ ನೀರಿನಲ್ಲಿ ಎಳೆಯುತ್ತ ಸಾಗಿ ಮತ್ತೆ ಮೊದಲಿನ ಸ್ಥಳಕ್ಕೆ ಬರುವ ವಾಡಿಕೆ. ಈ ಸಂದರ್ಭದಲ್ಲಿ ಸಹಸ್ರಾರು ಜನ ಈ ಸ್ಥಳದಲ್ಲಿ ಸೇರಿ ರಥಕ್ಕೆ ಬಾಳೆ ಹಣ್ಣು,ಉತ್ತತ್ತಿ ಎಸೆಯುವ ಮೂಲಕ ತಮ್ಮ ಭಕ್ತಿ ಸಮರ್ಪಣೆ ಮಾಡುವರು. ನಂತರ ಮೆರವಣಿಗೆಯಲ್ಲಿ ಸ್ವಾಮೀಜಿಯವರನ್ನು ಮಠಕ್ಕೆ ಕರೆದುಕೊಂಡು ಹೋಗಿ ಅಲ್ಲಿ ಕಾರ್ಯಕ್ರಮ ಧಾರ್ಮಿಕ ಪ್ರವಚನ ಜರುಗಿಸುವ ಮೂಲಕ ಮನೆಗಳಿಗೆ ತೆರಳಿ ಎಳ್ಳು-ಬೆಲ್ಲ ಹಂಚುವರು."ಎಳ್ಳು-ಬೆಲ್ಲ ಕೊಟ್ಟು ನಾವು-ನೀವೂ ಒಳ್ಳೆಯವರಾಗಿರೋಣ,ಒಳ್ಳೊಳ್ಳೆ ಮಾತನಾಡೋಣ ಎಳ್ಳು ಬೆಲ್ಲದ ಹಾಗೆ ಇರೋಣ ಎಂದು ಹೇಳುತ್ತ ಎಲ್ಲರಲ್ಲಿ ಪರಸ್ಪರ ಶುಭ ಕೋರುವ ಮೂಲಕ ಆಚರಿಸುವುದು ಇಂದಿಗೂ ತೆಪ್ಪದ ತೇರು ಎಳೆಯುವ ಸಂಪ್ರದಾಯದ ಮೂಲಕ ಸಂಕ್ರಾಂತಿ ಆಚರಣೆ ಉಳಿದುಕೊಂಡು ಬಂದಿದೆ.

**5.10 ಜೋಕುಮಾರ**

ಬೆಳೆ ಫಸಲು ಬಿಡುವ ಸಂದರ್ಭದಲ್ಲಿ ಮಳೆ ಬೇಕಾಗುತ್ತದೆ.ಆಗ ಜೋಕುಮಾರಸ್ವಾಮಿಯನ್ನು ಪೂಜಿಸಿದರೆ ಮಳೆ ಬರುತ್ತದೆ ಎಂಬ ನಂಬಿಕೆಯಿಂದಾಗಿ ಮಣ್ಣಿನಲ್ಲಿ ಜೋಕುಮಾರನನ್ನು ಮಾಡಿ ಪೂಜಿಸುವ ಸಂಪ್ರದಾಯವಿದೆ, ವಿಶೇಷವಾಗಿ ಉತ್ತರಕರ್ನಾಟಕದಲ್ಲಿ ಪ್ರಚಲಿತವಿರುವ ಈ ಹಬ್ಬಕ್ಕೆ ಅನಂತನ ಹುಣ್ಣಿವೆ.ಜೋಕುಮಾರನ ಹುಣ್ಣಿವೆ ಅಂತಲೂ ಕರೆಯುವರು.

ಈ ಹಬ್ಬವನ್ನು ಅಂಬಿಗರು.ಮಡಿವಾಳರು.ಬಾರಿಕೇರರು.ಕಬ್ಬಿಗರು.ತಳವಾರರು.ಸುಣಗಾರರರು ಗಂಗಾಮತಸ್ಥರು ಭಯ.ಭಕ್ತಿಯಿಂದ ಪೂಜಿಸುತ್ತಾರೆ. ಪ್ರತಿವರ್ಷ ಇಲ್ಲಿನ ಕುಂಬಾರರ ಮನೆಯಿಂದ ಮಣ್ಣು ತಂದು ಸಂಭಾಳಮಠದವರು ಜೋಕುಮಾರಸ್ವಾಮಿಯನ್ನು ಶ್ರದ್ಧಾಭಕ್ತಿಯಿಂದ ತಯಾರಿಸುತ್ತ ಬಂದಿರುವುದು ತಲತಲಾಂತರದಿಂದ ಬೆಳೆದು ಬಂದಿರುವ ಪರಂಪರೆಯಾಗಿದೆ. ಇಲ್ಲಿ ತಯಾರಿಸಿದ

ಮೂರ್ತಿಯನ್ನು ಬಡಿಗೇರ ಮನೆಗೆ ತಗೆದುಕೊಂಡು ಹೋಗುವರು.ಬಡಿಗೇರ ಮನೆತನದವರು ಆ ಮೂರ್ತಿಗೆ ಬಣ್ಣ ಹಚ್ಚಿ ಅಲಂಕಾರಗೈಯುವರು.ಹೀಗೆ ಅಲಂಕೃತಗೊಂಡ ಜೋಕುಮಾರಸ್ವಾಮಿಯನ್ನು ಬಾರಕೇರ ಮನೆಗೆ ತಗೆದುಕೊಂಡು ಹೋಗುವರು ಅವರು ಅಲ್ಲಿಂದ ಸುತ್ತಲಿನ 7 ಹಳ್ಳಿಗಳಾದ ತೆಗ್ಗಿಹಾಳ.ಜಕಬಾಳ.ಕಿಟದಾಳ.ಅರಟಗಲ್.ಬಸರಗಿ.ಮದ್ಲೂರ ಹೀಗೆ ಸಂಚರಿಸಿ ಕೊನೆಗೆ ಮುನವಳ್ಳಿಗೆ ಬಂದು ಊರಾಚೆಯ ಹೊಲಗೇರಿಗೆ ಬರುವರು. ಹೀಗೆ ತಿರುಗುವ ಅವರು ಬುಟ್ಟಿಯಲ್ಲಿ ಇಟ್ಟಿರುವ ಜೋಕುಮಾರನನ್ನು ಪ್ರತಿ ಮನೆಯ ಮುಂದೆ ಇಳಿಸಿ ಅವನಹುಟ್ಟು ಸಾವುಗಳ ಕುರಿತು ರಾಗಬದ್ದವಾಗಿ ಹಾಡುತ್ತಾರೆ.

ಜೋಕುಮಾರ ನನ ಕುವರ ಅಷ್ಟಮಿ ಗಡಿಗ್ಯಾಗ ಹುಟ್ಟಿದ್ಯೋ ಜೋಕುಮಾರ

ಬಚ್ಚಿ ಬುಟ್ಟಿಯಾಗ ಕುಂತಿರೋ ಜೋಕುಮಾರ
ಲಾಲಿಸಿ ಕೇಳ ಪವಳದ ಹಾಡ ನನ ಕೋಮರಾಮ
ಹಾಕಪ್ಪ ಅಗಳಿ ಹಾಕಪ್ಪ ಜೋಗಪ್ಪ
ಹೆಂಡತಿ ಮಿಂಡನ್ನ ಬಡಿಯಪ್ಪ ನನ ಕೋಮಾರ [36]

ಈ ರೀತಿ ಹಾಡು ಹೇಳುವರು

ಬಾರಕೇರರು ಈ ರೀತಿ 7 ಹಳ್ಳಿ ತಿರುಗಿ ಕೊನೆಗೆ ಮುನವಳ್ಳಿಗೆ ಬಂದು ಅಲ್ಲಿರುವ ಮಾದರ ಮನೆಗೆ ಬಾರಕೇರರು ಜೋಕುಮಾರನನ್ನು ಹಸ್ತಾಂತರಿಸುವರು.ಆ ದಿನ ಅನಂತನ ಹುಣ್ಣಿವೆ ಇರುವುದು.ಹುಣ್ಣಿವೆಯ ಆಚರಣೆ ಮಾಡಿ ಅವರ ಮನೆಯಲ್ಲಿ ರಾತ್ರಿ 12 ಗಂಟೆಯ ನಂತರ ಆತನ ಆಕೃತಿಯನ್ನು ಬೆನ್ನು ಹಿಂದು ಮಾಡಿ ತಗೆದುಕೊಂಡು ಹೋಗಿ ಅಗಸರ ಪಡಿಗೆ ಹೋಗಿ ಅಲ್ಲಿ ಆತನ ಕೈಕಾಲು ಮುರಿದು ಮುಚ್ಚುವರು.

ಈ ರೀತಿ ಇಂದಿಗೂ ಜೋಕುಮಾರಸ್ವಾಮಿಯ ಹಬ್ಬವನ್ನು ಆಚರಿಸುತ್ತ ಬಂದಿದ್ದು.ಅಗಸರ ಪಡಿಯಲ್ಲಿ ಮುಚ್ಚಿದ ನಂತರದ 3 ದಿನಗಳು ಅಗಸರು ಆ ಸ್ಥಳಕ್ಕೆ ಬಟ್ಟೆ ಒಗೆಯಲು ಹೋಗುವುದಿಲ್ಲ.ಏಕೆಂದರೆ ಆ ಸ್ಥಳದಲ್ಲಿ ಸೂತಕದ ಛಾಯೆ ಇರುವುದು ಎಂಬುದು ಇಂದಿಗೂ ಉಳಿದುಕೊಂಡು ಬಂದಿರುವ ನಂಬಿಕೆ. ಅದರ ಅರ್ಥ ಜೋಕುಮಾರನು ಆ ಸ್ಥಳದಲ್ಲಿ ನರಳುತ್ತಿರುತ್ತಾನೆ ಎಂಬ ನಂಬಿಕೆ.

### 5.11 ಹರಿನಾಮ ಸಪ್ತಾಹ ಆಚರಣೆಗಳು

ನೂರಾ ಹನ್ನೆರಡು ವರ್ಷಗಳಿಂದ ಹರಿನಾಮ ಸಪ್ತಾಹವನ್ನು ಶ್ರೀ ಗುರು ಬಾಬಾ ಆಜರೇಕರ ಸಂಪ್ರದಾಯದ ಹರಿಮಂದಿರದಲ್ಲಿ ಪ್ರತಿ ವರ್ಷ ಶ್ರಾವಣ ಶುದ್ದ ದಶಮಿಯಿಂದ ಶ್ರಾವಣ ವದ್ಯ ದ್ವಿತಿಯಾವರೆಗೆ ನಡೆಸಿಕೊಂಡು ಬರುತ್ತಿರುವ ಹರಿಕೀರ್ತನ ಸಪ್ತಾಹ ದಿಂಡೀ ಸೋಹಳಾ ಕಾರ್ಯಕ್ರಮ

36. ಸಂದರ್ಶನ, ರವಿ ಚಿದಂಬರ ಸರದೇಶಪಾಂಡೆ ವಯಸ್ಸು, 72, ಶ್ರೀಮತಿ ಜಯಶ್ರೀ ಕುಲಕರ್ಣಿ, ವಯಸ್ಸು–48

ಮುನವಳ್ಳಿಯಲ್ಲಿ ಜರುಗುತ್ತ ಬಂದಿರುವುದು ವಿಶಿಷ್ಟವಾಗಿದೆ. ಶ್ರೀ ಗುರು ಬಾಬಾ ಆಜರೇಕರ ಸಾಂಪ್ರದಾಯಿಕ ಭಜನಾ ಮಂಡಳಿಯವರು ತಮ್ಮ ನಿತ್ಯ ಸಾಂಪ್ರದಾಯಿಕ ಭಜನೆಗಳನ್ನು ಪುಸ್ತಕ ರೂಪದಲ್ಲಿ ಸ್ವಾತಂತ್ರ್ಯ ಯೋಧ ದಿವಂಗತ ಪಾಂಡುರಂಗ.ಶ.ಮಿರಜಕರ ಸ್ಮರಣಾರ್ಥ ಪ್ರಕಟಿಸಿದ್ದು ಇಂದಿನ ತಲೆಮಾರಿನವರಿಗೂ ಕೂಡ ಅವು ಲಭ್ಯವಾಗುವಂತೆ ಮಾಡಿರುವರು. 1902 ರಲ್ಲಿ ಜ್ಯೋತಿರ್ಲಿಂಗಪ್ಪ ಗಾಯಡೋಳೆ, ಅಂಬಾಜಿ ರೇಣಕೆ.ಶಟವಪ್ಪ ಮಿರಜಕರ ಕೃಷ್ಣರಾಯರು ಸರದೇಶಪಾಂಡೆ ವೆಂಕಣ್ಣ ಜೋಶಿ ಇನ್ನಿತರ ಭಕ್ತರು ಹರಿನಾಮ ಸಂಕೀರ್ತನ ಸಪ್ತಾಹವನ್ನು ಮಲಪ್ರಭಾ ನದಿ ದಂಡೆಯ ಮೇಲಿರುವ ವಿಠ್ಠಲ ಮಂದಿರದಲ್ಲಿ ಸ್ಥಾಪಿಸಿದರು.

ಇಂದಿಗೂ ಕೂಡ ಪ್ರತಿವರ್ಷ ಶ್ರಾವಣ ಮಾಸದಲ್ಲಿ ನಿತ್ಯ ಭಜನೆ.ಪುರಾಣ ಪ್ರವಚನ.ಹರಿನಾಮ ಸಪ್ತಾಹ ಜರುಗುತ್ತಿರುವುದು. 1963 ರಲ್ಲಿ ಕರ್ನಾಟಕದಲ್ಲಿ ಪ್ರಪ್ರಥಮವಾಗಿ ಗ್ರಂಥರಾಜ ಶ್ರೀ ಜ್ಞಾನೇಶ್ವರಿ ಸಾಮೂಹಿಕ ಪಾರಾಯಣವನ್ನು ಅತೀ ವಿಜೃಂಭಣೆಯಿಂದ ಆಚರಿಸಿದರು.ಅದರ ನೇತೃತ್ವವನ್ನು ಶ್ರೀ ಗುರು ಬಾಬಾಸಾಹೇಬ ಆಜರೇಕರ (ಫಡದ ಗುರುಗಳು) ಹಾಗೂ ಶ್ರೀ ಗುರು ಕಾಕಾಸಾಹೇಬರು ವಹಿಸಿಕೊಂಡರು.1970 ರಲ್ಲಿ ಶ್ರೀ ಸಂತ ಶಿರೋಮಣಿ ನಾಮದೇವ ಮಹಾರಾಜರ ಸಪ್ತ ಶತಾಬ್ದಿಯನ್ನು ಸರ್ವ ಧರ್ಮ ಸಮನ್ವಯವಾಗಿ ಆಚರಿಸಿದರು.ಮುಂದೆ 1976 ರಲ್ಲಿ ಜ್ಞಾನೇಶ್ವರ ಮಹಾರಾಜರ ಸಪ್ತ ಶತಾಬ್ದಿಯನ್ನು ಮುನವಳ್ಳಿಯ ಕೈವಲ್ಯಾಶ್ರಮದಲ್ಲಿ ಆಗಿನ ಉಪ ರಾಷ್ಟ್ರಪತಿ ಬಿ.ಡಿ.ಜತ್ತಿಯವರು ಅತಿಥಿಯಾಗಿ ಆಗಮಿಸಿ ವೆಂಕರಡ್ಡಿ ಹೂಲಿ ಇವರ ಮುಂದಳತ್ವದಲ್ಲಿ ಸಡಗರದಿಂದ ಆಚರಿಸಲಾಯಿತು.105 ನೆಯ ಹರಿನಾಮ ಸಂಕೀರ್ತನವನ್ನು 4–8–2006 ರಿಂದ 11–8–2006 ರ ವರೆಗೆ ಸರ್ವ ಗುರು ಹಿರಿಯರ ಕೃಪೆಯಿಂದ ಶ್ರೀ ಗುರು ತುಕಾರಾ.ಐ.ಕಾಳೆ(ಫಡದ ಗುರುಗಳು ಹಾಗೂ ಶ್ರೀ ಮ.ನಿ.ಪ್ರ.ಸ್ವಮುರುಘೇಂದ್ರ ಮಹಾಸ್ವಾಮಿಗಳ ನೇತೃತ್ವದಲ್ಲಿ ಪಂಚಲಿಂಗೇಶ್ವರ ದೇವಾಲಯದಲ್ಲಿ ಆಚರಿಸಲಾಯಿತು ಇದೇ ಸಂದರ್ಭ "ಭಜನಾ ಮಾಲಿಕೆ"ಪುಸ್ತಕದ ಎರಡನೇ ಅವೃತ್ತಿಯನ್ನು ಕೂಡ ಬಿಡುಗಡೆಗೊಳಿಸಲಾಯಿತು. ಈ ರೀತಿ ವಿಠ್ಠಲ ಮಂದಿರದ ಹರಿನಾಮ ಸಪ್ತಾಹ ತನ್ನದೇ ಆದ ವೈಶಿಷ್ಟ್ಯವನ್ನು ಹೊಂದಿದ್ದು ಪ್ರತಿವರ್ಷ ಶ್ರಾವಣ ಮಾಸದಲ್ಲಿ ಜರುಗುತ್ತ ಬಂದಿದೆ.



# ಅಧ್ಯಾಯ – ಆರು
# ಸಮಾರೋಪ

ಧರ್ಮಾರ್ಥಕಾಮ ಮೋಕ್ಷಾಣಾಂ ಉಪದೇಶ ಸಮನ್ವಿತಂ
ಪುರಾವೃತ್ತಂ ಕಥಾಯುಕ್ತಂ ಇತಿಹಾಸಂ ಪಚಕ್ಷತೇ

ಇತಿಹಾಸವೆಂದರೆ ಕೇವಲ ಘಟನೆಗಳ ಸರಮಾಲೆಯಾಗಿರದೆ ಜೀವನ ಮೌಲ್ಯಗಳನ್ನು ಬಿಂಬಿಸಿ ಜನರು ಅವುಗಳನ್ನು ರೂಢಿಸಿಕೊಳ್ಳುವಂತೆ ಪ್ರೇರೇಪಿಸುವುದಾಗಿದೆ. ತುಂಬಾ ವೈವಿಧ್ಯಮಯವಾದ ಸವದತ್ತಿ ತಾಲೂಕಿನ "ಮುನವಳ್ಳಿ ಒಂದು ಸಾಂಸ್ಕೃತಿಕ ಅಧ್ಯಯನ" ಒಟ್ಟು ಏಳು ಅಧ್ಯಾಯಗಳನ್ನು ಒಳಗೊಂಡಿದ್ದು.ಇತಿಹಾಸದ ಪ್ರಮುಖ ಆಕರಗಳಲ್ಲೊಂದಾದ ಶಾಸನಗಳಿಂದ ಹಿಡಿದು ಚರಿತ್ರೆಯ ಪುಟಗಳೊಡನೆ ಸದ್ಯದ ವರ್ತಮಾನದವರೆಗೂ ಜರುಗುತ್ತ ಬಂದಿರುವ ವಿವಿಧ ಸಾಂಸ್ಕೃತಿಕ ಚಟುವಟಿಕೆಗಳನ್ನು ಇಲ್ಲಿ ಕಟ್ಟಿಕೊಡುವ ಮೂಲಕ ನಮ್ಮ ಪರಂಪರೆಯ ಆಳವಾದ ಅಧ್ಯಯನಕ್ಕೆ ಸ್ಪಷ್ಟವಾದ ರೂಪ ಕೊಡುವ ಪ್ರಯತ್ನವನ್ನು ಈ ಪ್ರಬಂಧದಲ್ಲಿ ಮಾಡಲಾಗಿದೆ.

ಮುನವಳ್ಳಿಯಲ್ಲಿ ಜನಿಸಿ ದೇಶ ವಿದೇಶಗಳಲ್ಲಿ ಕೂಡ ತಮ್ಮದೇ ಖ್ಯಾತಿ ಗಳಿಸಿರುವ ಅನೇಕ ಮಹನೀಯರು ಮುನವಳ್ಳಿಯ ಹೆಸರನ್ನು ಸಾಗರದಾಚೆಗೂ ತಮ್ಮೊಡನೆ ಕೊಂಡೊಯ್ಯುವ ಮೂಲಕ ಮುನವಳ್ಳಿ ಹೆಸರು ಅಜರಾಮರವೆನಿಸಿದೆ ಅಂಥವರಲ್ಲಿ ದಿವಂಗತ ಸೀಮಣ್ಣ ಗೋಪಶೆಟ್ಟಿ ಅಮೇರಿಕಾ.(ವೈದ್ಯಕೀಯ ಕ್ಷೇತ್ರ) ವಿದ್ವಾಂಸರಾದ ಶ್ರೀ ಕೆ.ಟಿ.ಪಾಂಡುರಂಗಿ(ಬಾಲ್ಯದ ದಿನಗಳ ಒಡನಾಟ ಮುನವಳ್ಳಿಯಲ್ಲಿ) ಚಂದ್ರಗೌಡ.ಬ.ದ್ಯಾಮನಗೌಡರ (ಅಮೇರಿಕಾ)ನಿವೃತ್ತ ಸೇನಾಧಿಕಾರಿ ಕೃಷ್ಣ ದೇಶಪಾಂಡೆ(ಸದ್ಯ ದಾರವಾಡದಲ್ಲಿ ನೆಲೆಸಿರುವರು), ನಾಗರಾಜ.ಬಾ.ನಾವಲಗಟ್ಟಿ(ಆಸ್ಟ್ರೇಲಿಯಾ), ಅಚ್ಯುತ್ ನಾಯ್ಕ (ಆಸ್ಟ್ರೇಲಿಯಾ), ಗೋಪಾಲ್(ಪುರುಷೋತ್ತಮ), ನಾಯ್ಕ(ಅಮೇರಿಕಾ)ದಿವಂಗತ ಡಾ.ಎ.ಜೆ.ನಾಯ್ಕ ಇವರ ಮಗಳು ಆರತಿ ಗಿರಿಭಟ್ಟನವರ (ಸಾಹಿತ್ಯ)ಕೂಡ ಅಮೇರಿಕದಲ್ಲಿ ತಮ್ಮ ಪತಿಯೊಂದಿಗೆ ನೆಲೆಸಿರುವರು,.ಗೋಪಶೆಟ್ಟಿ ಮನೆತನದ ಮಹೇಶ.ಗೋಪಶೆಟ್ಟಿ ವೈದ್ಯಕೀಯ ರಂಗದಲ್ಲಿ ಖ್ಯಾತಿ ಹೊಂದಿದ್ದು ಇವರು ಕೂಡ ಲಂಡನ್.ಅಮೇರಿಕಗಳಲ್ಲಿ ವ್ಯಾಸಾಂಗ ಮತ್ತು ವೈದ್ಯಕೀಯ ಸೇವೆಗೈದು ಸದ್ಯ ಮದ್ರಾಸ್‌ನ ಅಪೋಲೋ ಆಸ್ಪತ್ರೆಯಲ್ಲಿ ಲಿವರ್‌ಗೆ ಸಂಬಂಧಿಸಿದ ಕಾಯಿಲೆಗಳಿಗೆ ಚಿಕಿತ್ಸೆ ನೀಡುವ ಖ್ಯಾತ ವೈದ್ಯರಾಗಿ ಕಾರ್ಯಗೈಯುತ್ತಿರುವರು. ಹುಬ್ಬಳ್ಳಿಯ ಪಾಲಿಟೆಕ್ನಿಕ್ ಕಾಲೇಜಿನಲ್ಲಿ ಓದುತ್ತಿರಯವ ಆಕಾಶ ಎಲಿಗಾರ "ಈಟ್ ಟುಗೆದರ್" ಎಂಬ ಕಿರುಚಿತ್ರ ನಿರ್ಮಿಸುವ ಮೂಲಕ ತನ್ನದೇ ಖ್ಯಾತಿಯನ್ನ ಚಿಕ್ಕ ವಯಸ್ಸಿನಲ್ಲಿ ಮೆರೆದಿದ್ದು.

ದಿವಂಗತ ಕರಿಬಸವಶಾಸ್ತ್ರಿಗಳು "ಅಲ್ಲಾಹ್ ನೀನೇ,ನೀನೇ ಈಶ್ವರ್:""ರೈತನ ಮಕ್ಕಳು"ಮೊದಲಾದ ಚಲನಚಿತ್ರಗಳಲ್ಲಿ ನಟಿಸುವ ಮೂಲಕ ಮುನವಳ್ಳಿಯ ಹಿರಿಮೆಯನ್ನು ಮೆರೆದರೆ.ದಿವಂಗತ ಆರ್.ವಿ.ಬೇವಿನಗಿಡದ ತಮ್ಮ ಕವಿತೆ, ಬರಹಗಳ ಮೂಲಕ ಜೊತೆಗೆ ಸದ್ಯ ಇದೇ ಮನೆತನದ

ಡಾಃಬಸು.ಬೇವಿನಗಿಡದ ಆಕಾಶವಾಣಿಯಲ್ಲಿ ಸೇವೆ ಸಲ್ಲಿಸುವ ಜೊತೆಗೆ ಸಾಹಿತ್ಯ ಕ್ಷೇತ್ರದಲ್ಲಿ ತಮ್ಮ ಹೆಸರನ್ನು ಮುನವಳ್ಳಿಯ ಬದುಕಿನೊಂದಿಗೆ ಇಮ್ಮಡಿಗೊಳಿಸಿರುವರು.ಬಸು.ಬೇವಿನಗಿಡದ ಅವರ ಕೃತಿಗಳೆಂದರೆ ಕನಸು(1995) ಕವನ ಸಂಕಲನ.ಇಳೆಯ ಅರ್ಘ(2010) ಕವನ ಸಂಕಲನ. ತಾಯವ್ವ(2003) ಬಾಳೆಯ ಕಂಬ(2011) ಹೊಡಿ ಚಕ್ಕಡಿ(2013) ಕಥಾ ಸಂಕಲನಗಳು. ಇಂಗ್ಲೀಷಿನಿಂದ ಅನುವಾದಿಸಿದ ಕೃತಿಗಳಾದ ಸಾಮರ್ ಸೆಟ್ ಮಾಮ್ ನ ಕಥೆಗಳ ಸಂಕಲನ ಅಪರಾಜಿತೆ. ಕಮಲಾದೇವಿ ಚಟ್ಟೋಪಾಧ್ಯಾಯ. ಹಸಿರು ಕಾಡಿನ ಗೆಳೆಯರು ಕಥಾ ಸಂಕಲನ. ಸ್ವಾತಂತ್ರ್ಯ ಚಳುವಳಿ ಮತ್ತು ಭಾರತೀಯ ಮುಸ್ಲಿಂರು. ಸಮಕಾಲೀನ ಭಾರತೀಯ ಕಥೆಗಳು. ಇವರು ಬೇಂದ್ರೆ ನಿಸರ್ಗ ಕಾವ್ಯ ಕುರಿತು ಪ್ರೊಃಎಚ್.ಎಂ.ಬೀಳಗಿಯವರ ಮಾರ್ಗದರ್ಶನದಲ್ಲಿ ಕನ್ನಡ ವಿಶ್ವವಿದ್ಯಾಲಯ ಹಂಪಿಯಲ್ಲಿ ಪಿಎಚ್‌ಡಿ ಪ್ರಬಂಧ ಮಂಡಿಸಿ ಡಾಕ್ಟರೇಟ್ ಪಡೆದಿರುವರು.

ಬೇವಿನಗಿಡದ ಅವರ ಕೃತಿಗಳಿಗೆ ಅನೇಕ ಪ್ರಶಸ್ತಿಗಳು ಕೂಡ ಬಂದಿವೆ.ಇಳೆಯ ಕನಸು ಕವನ ಸಂಕಲನಕ್ಕೆ ಬೆಳಗಾವಿ ಜಿಲ್ಲಾಶ ಪ್ರತಿಷ್ಠಾನ ಮತ್ತು ಕನ್ನಡ ಪುಸ್ತಕ ಪ್ರಾಧಿಕಾರದ ಪ್ರಶಸ್ತಿ.ತಾಯವ್ವ ಕಥಾ ಸಂಕಲನಕ್ಕೆ ಸೇಡಂನ ಅಮ್ಮ ಪ್ರಶಸ್ತಿ.ಬಾಳೆಯ ಕಂಬ ಕಥಾ ಸಂಕಲನಕ್ಕೆ ತುಮಕೂರಿನ ವೀಚಿ ಸಾಹಿತ್ಯ ಪ್ರಶಸ್ತಿ.ತೇಜಸ್ವಿ ಕಟ್ಟೀಮನಿ ಪ್ರಶಸ್ತ.ಬೆಳಗಾವಿ ಜಿಲ್ಲಾ ಸಾಹಿತ್ಯ ಪ್ರತಿಷ್ಠಾನ ಪ್ರಶಸ್ತಿ.ಅಜೂರ ಸಾಹಿತ್ಯ ಪ್ರತಿಷ್ಠಾನ ಪ್ರಶಸ್ತಿ ಹೀಗೆ ಹಲವು ಪ್ರಶಸ್ತಿಗಳು ಲಭಿಸಿವೆ. ಇವರು ಬರೆದಿರುವ ಮಕ್ಕಳ ಕಾದಂಬರಿಯಾದ "ನಾಳೆಯ ಸೂರ್ಯ" ಕಾದಂಬರಿಗೆ ಹರ್ಡೇಕರ ಪ್ರಶಸ್ತಿ ಕನ್ನಡ ಸಾಹಿತ್ಯ ಪರಿಷತ್ತಿನ ವಸುದೇವ ಭೂಪಾಲಂ ದತ್ತಿ ನಿಧಿ ಪ್ರಶಸ್ತಿ ಲಭಿಸಿದ್ದು.ಬಯಲು ಸೀಮೆಗೆ ಬಾಗಿನ ಎಂಬ ಸಂಪಾದಿತ ಕಥಾ ಸಂಕಲನದಲ್ಲಿ ಸಂಪಾದಕರಾಗಿಯೂ ಕಾರ್ಯ ನಿರ್ವಹಿಸಿರುವ ಇವರ ಮಗಳು ಚೈತ್ರಾ ಕೂಡ ಕವಯತ್ರಿಯಾಗಿ ಬೆಳೆಯುತ್ತಿರುವ ಪ್ರತಿಭೆ. ಬಿಎಸ್ ಸಿ ಓದುತ್ತಿರುವ ಚೈತ್ರಾ ಕೂಡ ಅನೇಕ ಕವಿಗೋಷ್ಠಿಗಳಲ್ಲಿ ಭಾಗವಹಿಸುವ ಜೊತೆಗೆ "ಕರೆಯುವುದು ಕೋಗಿಲೆ"ಎಂಬ ಕವನ ಸಂಕಲನ ಹೊರತಂದಿರುವಳು.

ದಿಲೀಪ ಜಂಬಗಿಯವರ ಮಗ ರೇಣುಪ್ರಸಾದ, ದಿಲೀಪ.ಜಂಬಗಿ ಕೂಡ ಕೆ.ಎ.ಎಸ್ ಉತ್ತೀರ್ಣತೆಯ ಜೊತೆಗೆ "ಕಲ್ಪನಾ ಛಾಯೆಯಲ್ಲಿ ಎಂಬ ಕಥಾ ಸಂಕಲನ ಪ್ರಕಟಿಸುವ ಮೂಲಕ ಸಾಹಿತ್ಯ ಕ್ಷೇತ್ರದಲ್ಲಿ ಉದಯೋನ್ಮುಖ ಬರಹಗಾರ.ಿನ್ನು ಪ್ರಾಥಮಿಕ ಶಾಲಾ ಶಿಕ್ಷಕರಾಗಿರುವ ವೈ.ಬಿ.ಕಡಕೋಳ ಕೂಡ ನಾಡಿನ ಎಲ್ಲ ಪತ್ರಿಕೆಗಳಿಗೆ ಲೇಖನ ಬರೆಯುವ ಜೊತೆಗೆ ಸಾವು ಬದುಕಿನ ನಡುವೆ (ಕಥಾ ಸಂಕಲನ 2003). ಸಂಸ್ಕಾರ ಫಲ(ಮಕ್ಕಳ ಕಥಾ ಸಂಕಲನ(2011) ಹೊರತಂದಿದ್ದು ಕನ್ನಡ ಪ್ರಭ ಪತ್ರಿಕೆಯಲ್ಲಿ ಇವರ ಬರಹಗಳು ಚರಿತ್ರೆಗೊಂದು ಕಿಟಕಿ ಅಂಕಣದಲ್ಲಿ ಪ್ರಕಟಗೊಂಡಿದ್ದು,ಕನ್ನಡಮ್ಮ ದಿನಪತ್ರಿಕೆಯಲ್ಲಿ ಕನ್ನಡ ಚಿತ್ರರಂಗದ ಸಾಹಿತಿಗಳು ಅಂಕಣ ಪ್ರಕಟಗೊಂಡಿದ್ದು ಬಿಡಿ ಲೇಖನಗಳು ನಿರಂತರವಾಗಿ ರಾಜ್ಯದ ಎಲ್ಲ ಪ್ರತಿಷ್ಠಿತ ಪತ್ರಿಕೆಗಳಲ್ಲಿ ನಿರಂತರವಾಗಿ ಪ್ರಕಟವಾಗುತ್ತಿವೆ.

ಪೋಲಿಸ್ ಇಲಾಖೆಯಲ್ಲಿ ಸೇವೆ ಸಲ್ಲಿಸಿ ಡಿವೈಎಸ್‌ಪಿ ಹುದ್ದೆಯವರೆಗೂ ಕ್ರಮಿಸಿ ಈಗ ನಿವೃತ್ತಿಯಲ್ಲಿರುವ ಪಾಂಡುರಂಗ.ಭೀಮರಾಯಪ್ಪ.ಯಲಿಗಾರ ಇವರೂ ಕೂಡ ಸಾಹಿತ್ಯ ಕ್ಷೇತ್ರಕ್ಕೆ ತಮ್ಮದೇ ಆದ ಕೊಡುಗೆ ನೀಡಿರುವರು.ಇವೆರು ಎರಡು ಕವನ ಸಂಕಲನಗಳನ್ನು ಪ್ರಕಟಿಸಿದ್ದು ಅವುಗಳೆಂದರೆ ನಿನ್ನೆ ನಾಳೆಯ ನಡುವೆ(1989) ಹಕ್ಕಿ ಗೂಡಿನ ಗರಿಕೆ(1997) ಜೊತೆಗೆ ಇವರ ರಚನೆಯ ಕವಿತೆಗಳು ಧ್ವನಿಮುದ್ರಿತವಾಗಿದ್ದು "ನೀನೇ"ಹೆಸರಿನ ಸಿ.ಡಿ.ಬದ್ರಿ ಪ್ರಸಾದ್ ಸಂಗೀತ ನಿರ್ದೇಶನದಲ್ಲಿ ಹೇಮಂತ್.ನಂದಿತಾ.ಅರ್ಚನಾ ಉಡುಪ.ರಫೀಕ್ ಶೇಖ.ಬದ್ರಿ ಪ್ರಸಾದ್ ಗಾಯನದಲ್ಲಿ ಎಂಟು ಗೀತೆಗಳಿದ್ದು ಅಷ್ಟೇ ಅಲ್ಲ ಬೆಂಗಳೂರು ದೂರದರ್ಶನದ ಚಂದನವಾಹಿನಿಯಲ್ಲಿಯ ಗೀತಗುಚ್ಚ ಕಾರ್ಯಕ್ರಮದಲ್ಲಿಯೂ ಇವರ ಕವಿತೆಗಳನ್ನು ಗಾಯಕ/ಗಾಯಕಿಯರು ಹಾಡಿರುವ ದೃಶ್ಯಗಳು ಕೂಡ ಪ್ರಸಾರವಾಗಿವೆ.ಸ್ವತಃ ಕಲಾವಿದರೂ ಆಗಿರುವ ಇವರೀಗ ಮುನವಳ್ಳಿಯಲ್ಲಿ ವಿಶ್ರಾಂತ ಜೀವನ ನಡೆಸುತ್ತಿರುವರು.

ಸೇನೆಯಲ್ಲಿ ವಿವಿಧ ಹುದ್ದೆಗಳಲ್ಲಿ ಸೇವೆ ಸಲ್ಲಿಸಿ ನಿವೃತ್ತರಾದರೂ ಕೂಡ ಸಮಾಜದ ವಿವಿಧ ಸ್ಥರಗಳ ಜನತೆಗೆ ಸಹಾಯಹಸ್ತ ನೀಡುತ್ತ ಧಾರವಾಡದಲ್ಲಿ ತಮ್ಮ ವಿಶ್ರಾಂತ ಜೀವನ ನಡೆಸುತ್ತಿರುವ ಕೃಷ್ಣ ಸರದೇಶಪಾಂಡೆಯವರು 1955ರಲ್ಲಿ ಸೇನೆಗೆ ಆಯ್ಕೆಗೊಂಡು ಡೆಹರಾಡೂನಿನಲ್ಲಿ ವೃತ್ತಿ ಆರಂಭಿಸಿ ಕಾಶ್ಮೀರ.ಮಥುರಾ.ನಾಗಾಲ್ಯಂಡ್.ಶ್ರೀಲಂಕಾಗಳಲ್ಲಿ ಕಾರ್ಯನಿರ್ವಹಿಸಿ ಲೆಫ್ಟಿನೆಂಟ್.ಕ್ಯಾಪ್ಟನ್.ಮೇಜರ್.ಲೆಫ್ಟಿನೆಂಟ್ ಕರ್ನಲ್.ಕರ್ನಲ್.ಬ್ರಿಗೇಡಿಯರ್.ಮೇಜರ್ ಜನರಲ್ ಹುದ್ದೆಗಳವರೆಗೆ ಬಡ್ತಿ ಪಡೆದು ಆಸ್ಸಾಂ ಗಡಿಯ 1971 ರ ಯುದ್ದದಲ್ಲಿ ಪ್ರತ್ಯಕ್ಷವಾಗಿ ಪಾಲ್ಗೊಂಡಿದ್ದಲ್ಲದೇ ನಿವೃತ್ತಿಯಾದ ಮೇಲೂ ಕಾರ್ಗಿಲ್ ಯುದ್ದ ನಡೆದಾಗ ಸೇನೆಯನ್ನು ಹುರಿದುಂಬಿಸಲು ಅಲ್ಲಿಗೆ ಹೋಗಿ ಬಂದಿರುವ ದೇಶಪ್ರೇಮಿ.ಸೇನೆಗಾಗಿ ಶಿಸ್ತುಪಾಲನಾ ಪಠ್ಯವೊಂದನ್ನು ರಚಿಸಿಕೊಟ್ಟಿರುವ ಇವರು ಸಾಹಿತಿಗಳೂ ಕೂಡ.ಭಾರತೀಯ ಸೇನೆಯಲ್ಲಿ ಇವರು ರಚಿಸಿದ ಪುಸ್ತಕವನ್ನು ಈಗಲೂ ಬಳಸಲಾಗುತ್ತಿದೆಯಂತೆ.ಇವರಿಗೀಗ 79 ವಯಸ್ಸು ಧಾರವಾಡದಲ್ಲಿ ವಿಶ್ರಾಮತ ಬದುಕು ಸಾಗಿಸುವ ಜೊತೆಗೆ ಕುಮಾಂವು ರೆಜಿಮೆಂಟಿನ ಹೆಸರಲ್ಲಿ ಪ್ರತಿಷ್ಠಾನವೊಂದನ್ನು ಸ್ಥಾಪಿಸಿ ಸಮಾಜದ ಜನರಿಗೆ ಸಹಾಯಹಸ್ತ ,ಯುವಕರಿಗೆ ಸೇನೆಯ ಮಾಹಿತಿ.ಜಾಗೃತಿ ಕಾರ್ಯಗಳನ್ನು ಮಾಡುವ ಮೂಲಕ ಬದುಕು ಸಾಗಿಸುತ್ತಿರುವರು.ಇವರೂ ಮುನವಳ್ಳಿಯವರು ಎಂಬುದು ಹೆಮ್ಮೆಯ ಸಂಗತಿ.

ಸದ್ಯ ರಾಣಿ ಚನ್ನಮ್ಮ ವಿಶ್ವವಿದ್ಯಾಲಯದ ಬೆಳಗಾವಿಯ ರಜಿಸ್ಟಾರ್ ಆಗಿರುವ ಜನಾರ್ಧನ್ ನಾಯ್ಕ ಕೂಡ ಮುನವಳ್ಳಿಯವರು. ಸ್ವಾತಂತ್ರ್ಯ ಹೋರಾಟಗಾರರಲ್ಲಿಯೂ ಕೂಡ ಮುನವಳ್ಳಿಯ ಅನೇಕ ಜನ ಪ್ರಮುಖ ಪಾತ್ರವಹಿಸಿದ್ದು ಅವರನ್ನೆಲ್ಲ ಸ್ಮರಿಸುವುದು ಕೂಡ ಇಂದಿನ ಅಗತ್ಯವಾಗಿದೆ.ಅಷ್ಟೇ ಅಲ್ಲ ಇಲ್ಲಿನ ನೇಕಾರಿಕೆಯ ಉದ್ಯಮ ಹಳೆಯ ಜಟಕಾ ಮಗ್ಗಗಳಿಂದ ಹಿಡಿದು ಇಂದಿನ ಪವರ್ ಲೂಮ್ ಮಗ್ಗಗಳವರೆಗೂ ಉಳಿದು ಬಂದು ಮುನವಳ್ಳಿಯಲ್ಲಿ ತಯಾರಾಗುವ ಸೀರೆಗಳು ಬೆಳಗಾವಿಯ ಮೂಲಕ ರಾಜ್ಯದಾದ್ಯಂತ ಮಾರುಕಟ್ಟೆಯನ್ನು ಉಳಿಸಿಕೊಂಡಿವೆ.ನೇಕಾರ ಓಣಿಯನ್ನು ಪ್ರವೇಶಿಸಿದರೆ ಸಾಕು ಮಗ್ಗಗಳ ಸದ್ದು ಅಲ್ಲಿ ತಯಾರಾಗುವ ಸೀರೆಗಳ ವಿಧಗಳನ್ನು ಕಾಣಬಹುದಾಗಿದೆ.

ಬದುಕಿನ ಯಾವುದೇ ಸಂದರ್ಭದಲ್ಲಿ ಹಿಂದಿನಿಂದ ಬಂದ ಆಚರಣೆಗಳನ್ನೇ ಅನುಸರಿಸುವುದು ಮುಂದುವರೆಸಿಕೊಂಡು ಹೋಗುವುದು ಗ್ರಾಮೀಣ ಜನತೆಯ ಸಹಜ ಸ್ವಭಾವವಾಗಿದೆ,.ಕಳೆದ ಕೆಲವು ವರ್ಷಗಳಿಂದ ಉಮೇಶ.ಬಾಳಿ ನೇತೃತ್ವದ ಬಸವಸೇನೆಯವರು ಅನೇಕ ಧಾರ್ಮಿಕ ಪ್ರವಚನ.ಉಪನ್ಯಾಸ ಕಾರ್ಯಕ್ರಮಗಳನ್ನು ಜರುಗಿಸುತ್ತ ಬಂದಿರುವುದಲ್ಲದೇ ಸ್ಥಳೀಯ ಜೈಂಟ್ಸ ಗ್ರುಪ್ ಆಪ್ ಇಂಟರನ್ಯಾಷನಲ್ ಸಂಸ್ಥೆ ಮತ್ತು ರೇಣುಕಾ ಸಹೇಲಿ ಮಹಿಳಾ ಸಂಘಟನೆ, ಅಕ್ಕನ ಬಳಗದವರು ಉತ್ತಮ ಸಾಂಸ್ಕೃತಿಕ ಸಾಹಿತ್ಯಕ ಚಟುವಟಿಕೆಗಳನ್ನು ನಡೆಸಿಕೊಂಡು ಉತ್ತಮ ಸಂಪ್ರದಾಯಕ್ಕೆ ಕಾರಣೀಭೂತರಾಗಿರುವುದು ಹೆಮ್ಮೆಯ ಸಂಗತಿ. ಅಂಥವುಗಳ ಜೊತೆಗೆ ನಾಡಿನ ವಿವಿಧ ಸಾಂಸ್ಕೃತಿಕ ಚಟುವಟಿಕೆಗಳನ್ನು ಮುನವಳ್ಳಿಯ ಜನತೆ ತಮ್ಮದೇ ಆದ ರೀತಿಯಲ್ಲಿ ಆಚರಿಸುತ್ತ ಬಂದಿದ್ದು ಇಲ್ಲಿಯ ಜನರ ಭಾವನಾತ್ಮಕ,ನೈತಿಕ,ಕ್ರಿಯಾತ್ಮಕವಾದ ಸೌಹಾರ್ದತೆಯನ್ನು ಬೆಳೆಸಿಕೊಂಡು ತಮ್ಮ ಸಂಪ್ರದಾಯಗಳನ್ನು ಆಚರಿಸಿಕೊಂಡು ಬರುವಲ್ಲಿ ತಮ್ಮದೇ ಆದ ಛಾಪನ್ನು ಮೂಡಿಸಿದ್ದು ಇಲ್ಲಿನ ಸಾಂಸ್ಕೃತಿಕ ಚಟುವಟಿಕೆಗಳು ಮುಂದಿನ ಪೀಳಿಗೆಗೂ ದಾರಿದೀಪವಾಗುವಲ್ಲಿ ಈ ಪ್ರಬಂಧ ಕೆಲವು ಚೌಕಟ್ಟಿನಲ್ಲಿ ಮುನವಳ್ಳಿಯ ಪರಂಪರೆಯನ್ನು ಕಟ್ಟಿಕೊಡುವ ಪ್ರಯತ್ನ ಮಾಡಿದೆ ಎಂದರೆ ಅತಿಶಯೋಕ್ತಿಯಲ್ಲ.



# ನಕ್ಷೆಗಳು

## ಸವದತ್ತಿ ತಾಲೂಕ ನಕ್ಷೆ



# ಮುನವಳ್ಳಿಯ ನಕ್ಷೆ


Royal
Theater
103
Munavalli
Manoli
Shri
anchalingeshwar
Temple



ಪಂಚಲಿಂಗೇಶ್ವರ ದೇವಾಲಯದಲ್ಲಿನ ಶಾಸನ



ಉಡಚವ್ವ ದೇವಾಲಯದಲ್ಲಿನ ಶಾಸನ



ಪಂಚಲಿಂಗೇಶ್ವರ ರಥೋತ್ಸವದ ದೃಶ್ಯ



ಪಂಚಲಿಂಗೇಶ್ವರ ದೇವಾಲಯದಲ್ಲಿನ ಪಂಚಲಿಂಗಗಳು





ಪಂಚಲಿಂಗೇಶ್ವರ ದೇವಾಲಯದ ವಿಹಂಗಮ ನೋಟ



ಪಂಚಲಿಂಗೇಶ್ವರ ದೇವಾಲಯದ ಮಹಾದ್ವಾರ



ಪಂಚಲಿಂಗೇಶ್ವರ ದೇವಾಲಯದಲ್ಲಿನ ವೀರಭದ್ರೇಶ್ವರ ಶಿಲ್ಪ



ಪಂಚಲಿಂಗೇಶ್ವರ ದೇವಾಲಯದಲ್ಲಿನ ಸಪ್ತಮಾತೃಕೆಯರು



ಪಂಚಲಿಂಗೇಶ್ವರ ದೇವಾಲಯ ಸಮುಚ್ಚಯದಲ್ಲಿನ ತ್ರ್ಯಂಭಕೇಶ್ವರ ಲಿಂಗ



ಪಂಚಲಿಂಗೇಶ್ವರ ದೇವಾಲಯದಲ್ಲಿನ ಮಹೀಷಮರ್ದಿನಿ ಶಿಲ್ಪ



ಪಂಚಲಿಂಗೇಶ್ವರ ದೇವಾಲಯದಲ್ಲಿ ವ್ಯಾಸ ಮಹರ್ಷಿಗಳ ಮೂರ್ತಿ



ಬ್ರಿಟಿಷ್ ಕಾಲದಲ್ಲಿನ ಪಂಚಲಿಂಗೇಶ್ವರ ರಥೋತ್ಸವದ ದೃಶ್ಯ



ಕೈವಲ್ಯಾಶ್ರಮಸ್ವಾಮಿ ಸಂಸ್ಥೆ



ಕೈವಲ್ಯಾಶ್ರಮಸ್ವಾಮಿ ಸಂಸ್ಥೆ



ಆಂಜನೇಯ ದೇವಾಲಯ(ಕೋಟೆ ಆವರಣ)



ಬನಶಂಕರಿದೇವಿ ದೇವಾಲಯದಲ್ಲಿನ ದೇವಿಯ ಶಿಲ್ಪ





ದಾನಮ್ಮದೇವಿ ದೇವಾಲಯದಲ್ಲಿನ ಅಲಂಕೃತ ದೇವಿ



ಕಾಳಿಕಾ ದೇವಾಲಯದಲ್ಲಿನ ದೇವಿಯ ಶಿಲ್ಪ



ಬನಶಂಕರಿದೇವಿ ದೇವಾಲಯದಲ್ಲಿನ ದೇವಿಯ ಶಿಲ್ಪ



ಮುನೇಶ್ವರ ಕರ್ತೃ ಗದ್ದುಗೆ(ಕಾಳಿಕಾ ದೇವಾಲಯ)



ವೀರಭದ್ರ ದೇವಾಲಯದ ಅಲಂಕೃತ ವೀರಭದ್ರ ದೇವರು



ವೆಂಕಟೇಶ್ವರ ದೇವಾಲಯದಲ್ಲಿನ ಅಲಂಕೃತ ಶಿಲ್ಪ



ವಿಠ್ಠಲಮಂದಿರ



ನಾಸಿಕ ಮಹಾರಾಜರು



ಸಂಕ್ರಾಂತಿ ಸಂದರ್ಭದಲ್ಲಿ
ಆಲೂರಮಠ



ಶ್ರೀ ಮ.ನಿ.ಪ್ರ.ಸ್ವ ಗುರುಸಿದ್ದ
ರಾಜಯೋಗೀಂದ್ರ ಮಹಾಸ್ವಾಮಿಗಳು



ಆಲೂರಮಠ ಶಿಂದೋಗಿ–
ಮುನವಳ್ಳಿ ಮಹಾದ್ವಾರ



ಆಲೂರಮಠ ಶಿಂದೋಗಿ– ಮುನವಳ್ಳಿ ಮಹಾದ್ವಾರ



ಶಿವಾನುಭವ ಕಾರ್ಯಕ್ರಮದ ದೃಶ್ಯ



ಚಂದ್ರಶೇಖರ ಮಠ



ಚಂದ್ರಶೇಖರ ಮಠದಲ್ಲಿನ ಕರ್ತೃಗದ್ದುಗೆ



ಕಂಬಿಮಠದ ಕರ್ತೃಗದ್ದುಗೆಗಳು



ಕಂಬಿಮಠದಲ್ಲಿನ ಶ್ರೀಶೈಲದೇವರ ಕಂಬಿ



ಸೋಮಶೇಖರಮಠ



ಸೋಮಶೇಖರಮಠದ
ಶ್ರೀ ಮುರುಘೇಂದ್ರ ಮಹಾಸ್ವಾಮಿಗಳು



ಸೋಮಶೇಖರ ಮಠದಲ್ಲಿನ
ಪುಣ್ಯಾರಾಧನೆಯ ಸಂದರ್ಭದ ದೃಶ್ಯ


ಸಾಲಿಮಠದಲ್ಲಿನ ಕರ್ತೃ ಗದ್ದುಗೆಗಳು


ಸಾವಳಗಿ ಮಠ


ಕೋಟೆಯಲ್ಲಿನ ಬುರುಜುಗಳು


ಕೋಟೆಯಲ್ಲಿನ ಆಂಜನೇಯ ದೇವಾಲಯದಲ್ಲಿನ ನಾಗಶಿಲ್ಪಗಳ ಕೆತ್ತನೆ




ಕೋಟೆಯೊಳಗಿನ ಬಾವಿಯ ದೃಶ್ಯ


ಕೋಟೆಯ ವಿಹಂಗಮ ನೋಟ


ಕೋಟೆಯಲ್ಲಿನ ಬುರುಜುಗಳು



ಕೋಟೆಯಲ್ಲಿನ ಆಂಜನೇಯ ದೇವಾಲಯ



ಉಡಚವ್ವ ದೇವಿ (ಕೋಟೆ ಆವರಣ)





ಕೋಟೆಯಲ್ಲಿನ ಉಡಚವ್ವ ದೇವಾಲಯದ ಎದುರು ಕಟ್ಟೆಯಲ್ಲಿನ ನಾಗಶಿಲ್ಪಗಳು



ಅಜ್ಜನಕಟ್ಟೆ(ವಿಷ್ಣುತೀರ್ಥರು)



ನವರಾತ್ರಿ ಉತ್ಸವದ ಆನೆಅಂಬಾರಿ ಮೆರವಣಿಗೆ



ನವರಾತ್ರಿ ಉತ್ಸವ ಬನ್ನಿ ಮುಡಿಯುವ ಸಂದರ್ಭದ ದೃಶ್ಯನೋಟ



ಕಾಳಿಕಾ ದೇವಾಲಯ ನವರಾತ್ರಿಯ ದೃಶ್ಯ



ನವರಾತ್ರಿ ಉತ್ಸವದ ಸಂದರ್ಭದಲ್ಲಿ ಪಲ್ಲಕ್ಕಿ ಉತ್ಸವ



ವೀರಭದ್ರ ದೇವಸ್ಥಾನದ ಜಾತ್ರೆಯಲ್ಲಿ ಪುರವಂತರು




ವೀರಭದ್ರ ದೇವರ ಜಾತ್ರೆಯ ವೀರಗಾಸೆಯ ದೃಶ್ಯ



ವೆಂಕಟೇಶ್ವರ ದೇವಾಲಯದ ರಥೋತ್ಸವ



ವೆಂಕಟೇಶ್ವರ ದೇವಾಲಯದಲ್ಲಿ ಮಹಿಳೆಯರಿಂದ ಭಜನಾ ಕಾರ್ಯಕ್ರಮ



ಬುತ್ತಿ ಪೂಜೆಯ ದೃಶ್ಯ(ತ್ರ್ಯಂಭಕೇಶ್ವರ ಲಿಂಗ)



ಆಂಜನೇಯನಿಗೆ ಬುತ್ತೀಪೂಜೆ



ಮಲಪ್ರಭಾ ನದಿಯಲ್ಲಿ ತೆಪ್ಪೋತ್ಸವ



ಬೀಭಿಪಾತಿಮಾ ಡೋಲಿ (ಮೋಹರಂ)



ಶಂಕರಲಿಂಗ ದೇವಸ್ಥಾನ



ಎದೆತುಂಬಿ ಹಾಡುವೆನು ಕಾರ್ಯಕ್ರಮದ ಉದ್ಘಾಟನೆಯ ದೃಶ್ಯ



ಬುಡುಬುಡುಕೆಯವರು



ಅಕ್ಕಿನ ಬಳಗದ ಕಲ್ಯಾಣ ಮಂಟಪ





ನಾಡಹಬ್ಬದ ಸಂದರ್ಭದಲ್ಲಿ ಮಕ್ಕಳ ವೇಶಭೂಷಣ



ರತಿ-ಮನ್ಮಥ (ಕಾಮದಹನ)



ಶ್ರೀ ರೇಣುಕಾ ಸಕ್ಕರೆ ಕಾರ್ಖಾನೆ




ದಿವಂಗತ ವಿ.ಪಿ.ಜೇವೂರ ಸ್ಮರಣೋತ್ಸವ



ವಿಜ್ಞಾನ ವೇದಿಕೆ(ರಿ)ಯ ಜಿಲ್ಲಾ ಮಟ್ಟದ ವಿಜ್ಞಾನ ವಸ್ತು ಪ್ರದರ್ಶನ

# ಆಕರ ಗ್ರಂಥಗಳು


| ಲೇಖಕರ ಹೆಸರು | ಕೃತಿ | ಪ್ರಕಾಶನ | ವರ್ಷ |
|---|---|---|---|
| ಅಸೂಟಿ ಹೆ. ಬ. (ಸಂ) | ಇನ್ನೂರು ಶಿವಾನುಭವಗಳು ಸ್ಮರಣ ಸಂಚಿಕೆ | ಆಲೂರು ಮಠ ಶಿಂದೋಗಿ ಮುನವಳ್ಳಿ | 2000 |
| ಕಮತರ ರಂಗನಾಥ (ಸಂ) | ಮುನಪುರಾಧೀಶರು | ಶ್ರೀ ಸೋಮಶೇಖರಮಠ ಪ್ರಕಾಶನ ಮುನವಳ್ಳಿ ಭಂಡಾರಹಳ್ಳಿ | 2012 |
| ಕುಲಕರಣಿ ನಾರಾಯಣರಾಯರು | ಶ್ರೀಮತ್ಪರಮಹಂಸ ಸದ್ಗುರು ಶ್ರೀ ಕೈವಲ್ಯಾಶ್ರಮಸ್ವಾಮಿ ಮಹಾರಾಜರ ಜೀವನ ಚರಿತ್ರೆ | ಕೈವಲ್ಯಾಶ್ರಮ ಸ್ವಾಮಿ ಸಂಸ್ಥಾ ಮುನವಳ್ಳಿ | 2009 |
| ಗೋಪಾಲ್ ಆರ್. (ಸಂ) | ಬೆಳಗಾವಿ ಜಿಲ್ಲೆಯ ಇತಿಹಾಸ ಮತ್ತು ಪುರಾತತ್ವ | ಪ್ರಾಚ್ಯವಸ್ತು ಮತ್ತು ಸಂಗ್ರಹಾಲಯಗಳ ನಿರ್ದೇಶನಾಲಯ ಮೈಸೂರು | 2010 |
| ಚಲವಾರ ಸರೋಜಿನಿ | ಬೆಳಗಾವಿ ಜಿಲ್ಲೆಯ ಸ್ವಾತಂತ್ರ್ಯ ಹೋರಾಟಗಾರರು | ಜಗದ್ಗುರು ಗಂಗಾಧರ ಧರ್ಮ ಪ್ರಚಾರ ಮಂಡಳ ಮೂರುಸಾವಿರ ಮಠ-ಹುಬ್ಬಳ್ಳಿ | 1988 |
| ದುರ್ಗಾದಾಸ್ ಕೆ. ಆರ್. | ಬಯಲಾಟ ಪದಗಳಲ್ಲಿ ಸಂಸ್ಕೃತಿ | ಕರ್ನಾಟಕ ವಿಶ್ವವಿದ್ಯಾಲಯ ಧಾರವಾಡ | 1995 |
| ಪಾಟೀಲ ಯ. ರು. | ಎಲ್ಲರ ಅಮ್ಮ ಎಲ್ಲಮ್ಮ | ದಿನೇಶ ಪ್ರಕಾಶನ, ಬೆಳಗಾವಿ | 2003 |
| ವೆಂಕಟೇಶ ಮಾಚಕನೂರು ಕೆ. ಎ. ಎಸ್. | ಸೌಂದತ್ತಿ | ಪ್ರಾಚ್ಯವಸ್ತು ಸಂಗ್ರಹಾಲ ಯಗಳು ಮತ್ತು ಪರಂಪರೆ ಇಲಾಖೆ, ಬೆಂಗಳೂರ | 2010 |
| ಶ್ರೀಕರಾಚಾರ್ಯ ಅಡವಿ | ಅವಧೂತ ಶಿರೋಮಣಿ ಶ್ರೀ ವಿಷ್ಣುತೀರ್ಥರು | ಶ್ರೀ ವ್ಯಾಸತತ್ತ್ವಜ್ಞ ಪ್ರತಿಷ್ಠಾನ ಮಾದನೂರು | 2012 |
| ಸಂಪಾದಕೀಯ ಕೃತಿ | ಶ್ರೀಗುರು ಬಾಬಾಸಾಹೇಬ ಅಜರೇಕರ ಸಾಂಪ್ರದಾಯಕ ಭಜನಾ ಮಾಲಿಕೆ | ಪ್ರಭಾಕರ ಶ. ಮಿರಜಕರ ಮುನವಳ್ಳಿ | 1995 |
| ಸಂಪಾದಕೀಯ ಕೃತಿ | ಜ್ಞಾನ ಪ್ರಭೆ ಸ್ಮರಣ ಸಂಚಿಕೆ | ಕರ್ನಾಟಕ ರಾಜ್ಯ ಪ್ರಾಥಮಿಕ ಶಾಲಾ ಶಿಕ್ಷಕರ ಸಂಘ ಬೆಳಗಾವಿ ಮತ್ತು ಚಿಕ್ಕೋಡಿ ಜಿಲ್ಲಾ ಘಟಕಗಳು | 2007 |

**ಲೇಖನಗಳು :**

1. ವೈ. ಬಿ. ಕಡಕೋಳ – ಶಿರಡಿಸಾಯಿಬಾಬಾ ಮಂದಿರ, 'ಸಂಯುಕ್ತ ಕರ್ನಾಟಕ ದಿನಪತ್ರಿಕೆ', 24–4–2012, ಪುಟ–3 (ಬೆಳಗಾವಿ ಕಹಳೆ ಪುರವಣಿ)
2. ವೈ. ಬಿ. ಕಡಕೋಳ : ಶ್ರೀಗಳು ಶಿವಾನುಭವ – ಇನ್ನೂರು ಶಿವಾನುಭವಗಳು, ಸ್ಮರಣ ಸಂಚಿಕೆ, 2000, ಪುಟ – 52.
3. ವೈ. ಬಿ. ಕಡಕೋಳ : ಮುನಪುರಾಧೀಶ – ಮುರುಘೇಂದ್ರ ಸ್ವಾಮಿಗಳು – ಬಸವವಾಣಿ ಮಾಸಪತ್ರಿಕೆ, ಮೇ – 2012, ಪುಟ – 9.
4. ವೈ. ಬಿ. ಕಡಕೋಳ : 'ಮರಿಕೋಗಿಲೆಗಳ ಸಂಗೀತ ಸಂಭ್ರಮ', ಲೋಕದರ್ಶನ ದಿನಪತ್ರಿಕೆ, 3–2–2013.
5. ವೈ. ಬಿ. ಕಡಕೋಳ : 'ನಮ್ಮೂರ ನಾಡಹಬ್ಬ', 'ಹಸಿರುಕ್ರಾಂತಿ' ದೀಪಾವಳಿ ವಿಶೇಷಾಂಕ, 2009, ಪುಟ 11–17.
6. ವೈ. ಬಿ. ಕಡಕೋಳ : 'ಶಿಕ್ಷಣ ಪ್ರೇಮಿ ಜೇವೂರ ಗುರುಗಳು', ಕನ್ನಡಮ್ಮ ದಿನಪತ್ರಿಕೆ, ಪುಟ – 6, 25–1–2010.
7. ವೈ. ಬಿ. ಕಡಕೋಳ : 'ಪತ್ರಿಕಾರಂಗದ ಹಿರಿಯ ಚೇತನ ಮಲ್ಲೇಶಪ್ಪ ಬಡೆಮ್ಮಿ', ಕನ್ನಡಮ್ಮ ದಿನಪತ್ರಿಕೆ – 17–7–2011, ಪುಟ – 4
8. ವೈ. ಬಿ. ಕಡಕೋಳ : ದೇವರ ಮೂರ್ತಿಗೆ ಬುತ್ತೀ ಪೂಜೆಯ ಅಲಂಕಾರ', ಪ್ರಜಾವಾಣಿ ದಿನಪತ್ರಿಕೆ, ಕರ್ನಾಟಕದರ್ಶನ ಪುರವಣಿ, 21–7–2012.
9. ಶ್ರೀಮತಿ ಅನ್ನಪೂರ್ಣ ಪ. ಲಂಬೂನವರ, : ಅಕ್ಕನಬಳಗ, ಅಪ್ರಕಟಿತ ಲೇಖನ.

**ದಿನ ಪತ್ರಿಕೆ/ಮಾಸಪತ್ರಿಕೆ / ವಿಶೇಷಾಂಕ**

1. ಸಂಯುಕ್ತ ಕರ್ನಾಟಕ
2. ಪ್ರಜಾವಾಣಿ
3. ಕನ್ನಡಮ್ಮ
4. ಲೋಕದರ್ಶನ
5. ಲೋಕದರ್ಶನ (ದೀಪಾವಳಿ ವಿಶೇಷಾಂಕ)
5. ಬಸವವಾಣಿ ಮಾಸಪತ್ರಿಕೆ
6. ಹಸಿರುಕ್ರಾಂತಿ (ದೀಪಾವಳಿ ವಿಶೇಷಾಂಕ)

